ಲೇಖಕ:—

ತ್ರ್ಯಂಬಕ ರಾಮಚಂದ್ರ ಪತಕಿ,

ಕಿಲ್ಲೇದಾರ ತೊರಗಲ್ಲ.



ದಿ. ಕರ್ನಾಟಕ ಟ್ರೇಡಿಂಗ ಕಂಪೆನಿ,

ಧಾರವಾಡ.

೧೯೨೨.

[PRICE: 12 AS.

## ವಿಜಾಪೂರದಲ್ಲಿ ಕೆಳಗಿನ ವ್ಯಾಪಾರಸ್ಥರ ಅಂಗಡಿ ಪ್ರಸಿದ್ಧ ಅವೆ.

### ಜವಳೀ ಅಂಗಡಿ

೧. ರಾಘವೇಂದ್ರರಾವ ಕಂಪೆನಿ
೨. ರಾಮರಾವ ಕೆಂಭಾವಿ
೩. ವೆ. ಗ. ಅಧ್ಯಾಪಕ
೪. ರಾ. ಭಿಡೆ ಮುಂಡೆವಾಡಿ
೫. ಸೀತಾರಾಮಪಂತ ಗೋಖಲೆ
೬. ಚೋಟಪ್ಪಾ ಸಟವಪ್ಪಾ
೭. ವೆಂಕಣ್ಣಾ ಮುಣ್ಣೂರ

### ಸೆರಾಫಿ ಅಂಗಡಿ

೧. ರಾಘವೇಂದ್ರರಾವ ಕಂಪೆನಿ
೨. ನಾರಾಯಣ ಗ. ಭಿಡೆ
೩. ವಿಷ್ಣುದಾಸ ದರಬಾರ
೪. ಲಕ್ಷ್ಮಣರಾವ ಜೋಸಿ

### ಸ್ಟೇಶನರೀ ಅಂಗಡಿ

೧. ವ್ಯ. ಬ. ಜೋಶಿ
೨. ಪರಾಂಜಪೆ ಮಾಮಾ
೩. ನಾರಾಯಣಾಚಾರ್ಯ ಜಮಖಂಡಿ
೪. ಗೋವಿಂದ ಗೋಪಾಲ ಗಾಡಗೀಳ

## ವಿಜಾಪೂರದಲ್ಲಿದ್ದ ಮುದ್ರಣಾಲಯಗಳು.

೧. ಗ್ರಾಮಾಧಿಕಾರಿ ಪ್ರೆಸ್
೨. ವಿಠ್ಠಲ ಮುದ್ರಣಾಲಯ
೩. ದತ್ತ ಮುದ್ರಣಾಲಯ
೪. ನ್ಯೂ ಪ್ರಿಂಟಿಂಗ್ ಪ್ರೆಸ್ (ಪರ್ವತೀಕರ ಇವರದು)

## ಫೋಟೋಗ್ರಾಫರ್ಸ.

೧. ಕೆ. ಆರ್. ತೊರವಿ
೨. ಹಣಮಂತರಾವ ಕುಲಕರ್ಣಿ
೩. ಅಮೃತಲಾಲ ಪರದೇಶಿ
೪. ಕುಲಕರ್ಣಿ ಡ್ರಾಯಿಂಗ ಮಾಸ್ತರ

## ವಿಜಾಪೂರದಲ್ಲಿದ್ದ ಹಿಂದು ಉಪಹಾರಾಲಯ.

೧. ರಾ. ವೆಂಕಣ್ಣಾ ಮಣ್ಣೂರು
೨. ಪಾಂಡಪ್ಪಾ ಸೋಲ್ಲಾಪೂರ
೩. ರಾ. ಜಾಲೀಹಾಳ

ಸಚಿತ್ರ

# ವಿಜಾಪುರ ವರ್ಣನೆ.

(ವಿಜಾಪುರ ಗಾಝೇಟಿಯರ, ವಿಜಾಪುರ ಗಾಯಿಡ, ವಿಜಾಪುರ ವರ್ಣನ ಮುಂತಾದ ಪುಸ್ತಕಗಳ ಆಧಾರಗಳಿಂದ ಪ್ರವಾಸಿಕರ ಸಲುವಾಗಿ ಬರೆದಿರುವದು.)


ಲೇಖಕ:

ತ್ರ್ಯ. ರಾ. ಪತಕಿ.



ಮಂಗಳೂರಿನಲ್ಲಿ

ರಾ. ರಾ. ವಿ. ಎಸ್. ಕಾಮತ್

ಇವರು ತಮ್ಮ ಶಾರದಾ ಪ್ರಿಂಟಿಂಗ ಪ್ರೆಸ್ಸಿನಲ್ಲಿ ಮುದ್ರಿಸಿದರು

ಮತ್ತು

ಶ್ರೀಯುತ ಗು. ಭೀ. ಧಾರವಾಡಕರ ಮಾಲಿಕ,

ದಿ. ಕರ್ನಾಟಕ ಟ್ರೇಡಿಂಗ ಕಂಪೆನಿ ಇವರು ಧಾರವಾಡದಲ್ಲಿ ಪ್ರಸಿದ್ಧಿಸಿದರು.





1922.




# ಗ್ರಂಥಕರ್ತನ ಮುನ್ನುಡಿ.



ಈ ಹೆಸರುವಾಸಿಯಾದ ನಗರದ ವರ್ಣನೆಯು ಕನ್ನಡದಲ್ಲಿ ಇಲ್ಲದೆಂಬುದನ್ನು ನೋಡಿ ಮನಸ್ಸಿನಲ್ಲಿ ನೊಂದುಕೊಂಡು ಈಗ ನಾಲ್ಕು ವರ್ಷಗಳ ಹಿಂದೆ ನಾನು ಮರಾಠಿಯಲ್ಲಿ ಮುದ್ರಿಸಿದ ಪುಸ್ತಕದ ಆಧಾರದಿಂದ ಈ ಕನ್ನಡ ವರ್ಣನೆಯನ್ನು ಮುದ್ರಿಸಿ ಪ್ರಸಿದ್ಧಮಾಡಿದ್ದೇನೆ. ಇದರಲ್ಲಿ ಮರಾಠಿ ಪುಸ್ತಕದೊಳಗಿದ್ದ ಎಷ್ಟೋ ಕುಂದು ಕೊರತೆಗಳನ್ನು ದೂರ ಮಾಡಿದ್ದರೂ ಎಷ್ಟೋ ದೋಷಗಳು ಇನ್ನೂ ಉಳಿದಿರುತ್ತವೆಂಬುದನ್ನು ನಾನು ಪೂರಾ ಬಲ್ಲೆನು. ನನ್ನ ಕನ್ನಡ ಬಂಧುಗಳು ಇದನ್ನು ಆದರದಿಂದ ಓದಿ ಇದರ ಸುಧಾರಣೆಗೋಸ್ಕರ ಮಾಡಿದ ಸೂಚನೆಗಳನ್ನು ನಾನು ಅತ್ಯಾದರದಿಂದ ಸ್ವೀಕರಿಸಿ ಮುಂದಿನ ಆವೃತ್ತಿಯಲ್ಲಿ ಸರಿಯಾಗಿ ಕಂಡು ಬಂದ ಎಲ್ಲ ಬದಲಾವಣೆಗಳನ್ನು ಮಾಡುವೆನು.

ಈ ಪುಸ್ತಕವನ್ನು ಕನ್ನಡಿಸುವಾಗ ನನಗೆ ಕನ್ನಡ ಕಾವ್ಯರತ್ನ ರಾವಜಿ ಬಾಳಜಿ ಕುಲಕರ್ಣಿ ಇವರು ಬಹಳ ಸಹಾಯವನ್ನು ಮಾಡಿದರು. ಬಹಳ ಅಂಶದಿಂದ ಅವರೇ ಈ ಪುಸ್ತಕದ ಭಾಷಾಂತರ ಮಾಡಿದರೆನ್ನಲೂ ಅಡ್ಡಿಯಿಲ್ಲ. ಇದರಲ್ಲಿ ಸೇರಿಸಿದ ಚಿತ್ರಗಳು ನಾನೇ ಸ್ವತಃ ಫೊಟೋ ತೆಗೆದುಕೊಂಡದ್ದಿರುತ್ತವೆ. ಆದರೂ ಒಂದೆರಡು ಚಿತ್ರಗಳನ್ನು ರಾವಬಹಾದ್ದೂರ ಕೆ. ಯನ್. ಭಿಡೆ ಬಿ. ಎ, ಎಲ್ ಎಲ್. ಬಿ. ಮುನಸೂಫ ಬಿಜಾಪೂರ ಇವರು ಕೊಟ್ಟಿರುವರು. ಎಲ್ಲ ಚಿತ್ರಗಳ ಬ್ಲಾಕುಗಳನ್ನು ಎಸ್. ಬಿ. ಸಹಸ್ರಬುದ್ಧೆ ಬಿ. ಎ. ಪುಣೆ ಇವರು ಅತಿ ಶ್ರಮದಿಂದ ಮಾಡಿಕೊಟ್ಟಿರುವರು. ಮುದ್ರಣಾಲಯದ ಮಾಲಕ ಮತ್ತು ವ್ಯವಸ್ಥಾಪಕರ ಸಹಾಯವೂ ಬಹಳವಾಗಿದೆ. ಆದಕಾರಣ ಗ್ರಂಥ ಕರ್ತನು ಈ ಎಲ್ಲ ಸದ್ಗೃಹಸ್ಥರಿಗೆ ಆಭಾರಿಯಾಗಿರುವನು.

ತ್ರ್ಯಂಬಕ ರಾಮಚಂದ್ರ ಪತಕಿ.



ಶ್ರೀ ನೃರಸಿಂಹ ದೇವರ ಗುಡಿ.

# ಅನುಕ್ರಮಣಿಕೆ.



# ವಿಜಾಪುರ ವರ್ಣನೆಯು.

## ೧ನೆಯ ಪ್ರಕರಣ.

## ನಗರದ ಸಾಮಾನ್ಯ ವರ್ಣನೆಯು.

ಒಂದು ಕಾಲಕ್ಕೆ ವೈಭವದ ಅತ್ಯುಚ್ಚ ಶಿಖರಕ್ಕೆ ಮುಟ್ಟಿ ಕಾಲನ ಭಯಂಕರವಾದ ಹೊಡತಕ್ಕೀಡಾಗಿ ಯಾವ ದೊಡ್ಡ ಪಟ್ಟಣಗಳು ಹಿಂದುಸ್ಥಾನದಲ್ಲಿ ನಾಶವಾಗಿರುವವೋ, ಮತ್ತು ಅವು ಎಂಥ ನಷ್ಟಸ್ಥಿತಿಯಲ್ಲಿದ್ದರೂ ಇತಿಹಾಸಕಾರರೂ, ಶಿಲ್ಪಕಲಾನಿಪುಣರೂ ಯಾವ ಶಹರಗಳಲ್ಲಿ ಏನಾದರೂ ಕಲಿಯಲು ದೊರೆತೀತೆಂದು ನೋಡಹೋಗಲು ಹಾತೊರೆಯುವರೋ ಅಂಥವುಗಳಲ್ಲಿ ಉತ್ತರ ಕರ್ನಾಟಕದೊಳಗಿದ್ದ ವಿಜಾಪುರವು ಒಂದು ಹೆಸರುವಾಸಿಯಾದ ಪಟ್ಟಣವಾಗಿದೆ.

ಈ ಶಹರವು ಉತ್ತರ ಅಕ್ಷಾಂಶ ೧೬—೫೫, ಮತ್ತು ಪೂರ್ವ ರೇಖಾಂಶ ೭೫—೪೪, ಇವುಗಳ ನಡುವೆ ಇದ್ದು ಸಮುದ್ರ ಸಪಾಟಿಗಿಂತ ೧೯೫೦ ಅಡಿ ಎತ್ತರದಲ್ಲಿದೆ. ಮುಂಬೈ ಕಡೆಯಿಂದ ಈ ಊರಿಗೆ ಬರುವವರು ಸೊಲ್ಲಾಪೂರದ ದಕ್ಷಿಣಕ್ಕೆ ೯ ಮೈಲಿನ ಮೇಲೆ ಇರುವ ಹುಟಗಿ (ಜಂಕ್ಶನ್) ಸ್ಟೇಶನಕ್ಕೆ ಇಳಿಯಬೇಕಾಗುವದು. ಮತ್ತು ಸದರ್ನ ಮರಾಠಾ ರೇಲ್ವೆಯ ಗದಗ—ಹುಟಗಿ ಶಾಖೆಯಿಂದ ಈ ಊರಿಗೆ ಬರಬೇಕಾಗುವದು. ಮದ್ರಾಸ, ಮೈಸೂರು, ಕಾರವಾರಗಳ ಕಡೆಯಿಂದ ಬರುವದಾದರೆ ಗದಗಿನ ವರೆಗೆ ಬಂದು, ಮೇಲಿನ ರೇಲ್ವೆಯ ಶಾಖೆಯಿಂದ

ಇಲ್ಲಿಗೆ ಬರಬೇಕು. ಈ ಊರು ಹುಟಗಿಯಿಂದ ೫೮ ಮೈಲು ಮತ್ತು ಗದಗಿನಿಂದ ೧೧೮ ಮೈಲು ದೂರದಲ್ಲಿದೆ. ಇಲ್ಲಿಗೆ ಬರುವ ಗಾಡಿಗಳು ಸಣ್ಣವಿದ್ದು ಕಡಿಮೆ ವೇಗದವು ಇರುವದರಿಂದಲೂ, ಮಾರ್ಗದಲ್ಲಿ ರಮಣೀಯವಾದ ಸೃಷ್ಟಿಸೌಂದರ್ಯವೇನೂ ನೋಡಲಿಕ್ಕೆ ಇಲ್ಲದ್ದರಿಂದಲೂ, ಪ್ರವಾಸವು ತುಸು ತ್ರಾಸದಾಯಕವೆನಿಸುವದು. ಯಾವ ಕಡೆಯಿಂದ ಬಂದರೂ ಇನ್ನೂ ೨೦।೨೫ ಮೈಲು ದೂರಿರುವಾಗಲೇ **ಗೋಳಗುಮಟವು** ಕಾಣಿಸಹತ್ತುತ್ತದೆ. ಸಮೀಪಕ್ಕೆ ಬಂದಂತೆ, ಶಹರದ ಸುತ್ತಲಿನ ಅರಕಿಲ್ಲೆಯಲ್ಲಿಯ ಇಮಾರತಿಗಳೂ, ಗಡಿಯೊಳಗಿನ ಇಮಾರತಿಗಳೂ ಕಾಣಹತ್ತುತ್ತವೆ. ಪೂರ್ವಕ್ಕೆ ಆದಿಲಶಹನ ಕಾಲದಲ್ಲಿ ಅನೇಕ ಕಾಳಗಗಳಾದ ಸ್ಥಳದಲ್ಲಿ ಐನಉಲ್ಮುಲ್ಕನ ಗುಮಟುಳ್ಳ ಗೋರಿಗಳೂ, ಜಹಾಬೇಗಮ್ಮನ ಅಪೂರ್ಣ ಇಮಾರತಿಯೊಳಗಿನ ಗೋರಿಗಳೂ, ಕಾಣಿಸುತ್ತವೆ. ಪಶ್ಚಿಮಕ್ಕೆ ದೃಷ್ಟಿಯನ್ನು ಚಲ್ಲಿದರೆ ಮನಸ್ಸಿನ ಮೇಲಾಗುವ ವಿಲಕ್ಷಣ ಪರಿಣಾಮವನ್ನೇನೂ ಬರೆಯಲಿಕ್ಕಾಗದು. ಅವುಗಳಲ್ಲಿ **ಗೋಳಗುಮಟವು** ಬಹಳ ದೊಡ್ಡದಿರುವದರಿಂದ ನೋಡುವವರ ಲಕ್ಷವನ್ನು ಮೊದಲು ಆಕರ್ಷಿಸುತ್ತದೆ. ಅನಂತರ ಜುಮ್ಮಾಮಸೀದೆ, ಅಸಾರ ಮಹಾಲ, ಅರಮನೆಯ ಕಿಲ್ಲೆಯೊಳಗಿನ ಏಳು ಅಂತಸ್ತಿನ ಇಮಾರತಿಯ ಶಿಖರ, ಉಪ್ಪರಬುರುಜು, ಇಬ್ರಾಹಿಮ್ ರೋಜಾ ಇವು (ತೀರ ಪಶ್ಚಿಮಕ್ಕೆ) ಕಾಣಿಸುವವು.

ಈ ನಗರದ ಆಕಾರವು ಮಾವಿನ ಹಣ್ಣಿನಂತೆ ಇರುವದು. ಒಂದು ಕಾಲದಲ್ಲಿ ಇದು ರಾಜಧಾನಿಯ ಸ್ಥಳವಿದ್ದಿತೆಂದು ಇದಕ್ಕೆ ಸಾಕ್ಷಿಯನ್ನು ನುಡಿಯುವ ಜಗತ್ಪ್ರಸಿದ್ಧ ಕಟ್ಟಡಗಳು ಇಲ್ಲಿ ಇರುವದನ್ನು ನೋಡಿ ಪ್ರವಾಸಿಕರು ಇಲ್ಲಿಯ ಸ್ಟೇಶನ್ನವು ಭವ್ಯವೂ ಸುಂದರವೂ ಆಗಿರಬಹುದೆಂದು ಊಹಿಸುವದು ಸ್ವಾಭಾವಿಕವಾಗಿದೆ. ಆದರೆ ಸ್ಟೇಶನ್ನವಲ್ಲಿ ಇಳಿದ ಕೂಡಲೆ ಅವರ ಈ ತಿಳಿವಳಿಕೆಯು ತಪ್ಪಾಗುವದು. ವಿಜಾಪುರಕ್ಕೆ ಎರಡು ಕಿಲ್ಲೆಗಳಿದ್ದು ಅವುಗಳಲ್ಲಿ ಒಂದು ಅರಮನೆಯ ಸುತ್ತಲೂ.

ಮತ್ತೊಂದು ಶಹರದ ಸುತ್ತಲೂ ಇವೆ. ಶಹರಕ್ಕೆ ಇರುವ ಕಿಲ್ಲೆಗೆ ಸಣ್ಣದೊಡ್ಡ ಅಗಸೆಗಳು ೪೦ಕ್ಕಿಂತ ಹೆಚ್ಚಿರುತ್ತವೆ; ಮತ್ತು ಆ ಕಿಲ್ಲೆಯ ಮೇಲೆ ೯೩ ಬುರುಜುಗಳಿರುತ್ತವೆ. ಈ ಕೋಟೆಯ ಸುತ್ತಳತೆಯು ೬॥ ಮೈಲು ಇರುತ್ತದೆ. ಇದರ ಸುತ್ತಲು ಕಂದಕವಿದ್ದು ಪೂರ್ವದಲ್ಲಿ ಇಲ್ಲಿ ನೀರು ವಿಪುಲವಾಗಿತ್ತು. ಕೆಲಕೆಲವು ಕಡೆಗೆ ಇನ್ನೂ ಕೆಲ ಸೆಲೆಗಳು ಇದ್ದೇ ಇರುತ್ತವೆ. ಕೋಟೆಯ ಗೋಡೆಯ ಎತ್ತರವು ಕೆಲವು ಕಡೆಗೆ ೪೦ ಅಡಿ ಕೆಲವು ಕಡೆಗೆ ಲ೦ ಫೂಟು ಇರುತ್ತದೆ. ಸೇನೆಯನ್ನು ಬೇಕಾದ ಕಡೆಗೆ ಒಯ್ಯಲು ಅನುಕೂಲವಾಗಬೇಕೆಂದು ಕೋಟೆಯ ಗೋಡೆಯ ಮೇಲೆಯೇ ೧೫ ಅಡಿ ಅಗಲಾದ ಮಾರ್ಗವು ಮಾಡಲ್ಪಟ್ಟಿರುವದು. ಅಲ್ಲಲ್ಲಿ ಮದ್ದು ಗುಂಡುಗಳನ್ನು ಇಡಲಿಕ್ಕೂ ಹಾರಿಸುವವರಿಗೆ ನಿಲ್ಲಲಿಕ್ಕೂ ಸ್ಥಳಗಳು ಇರುತ್ತವೆ. ಈಗ ಮುಖ್ಯವಾಗಿ ಶಹರದಲ್ಲಿ ೫ ಅಗಸೆಗಳಿಂದ ಜನರ ಪ್ರವೇಶವಾಗುತ್ತದೆ. ಸ್ಟೇಶನ್ನದಿಂದ ಊರಲ್ಲಿ ಹೋಗುವ ಮಾರ್ಗವು ಕೋಟೆಯ ಗೋಡೆಯನ್ನು ಒಡೆದು ಮಾಡಲ್ಪಟ್ಟಿದೆ.

ಶಹರದಲ್ಲಿ ಸುಮಾರು ೪೦ ಪೇಟೆಗಳು ಇದ್ದು, ಅವು ಮ್ಯುನಿಸಿಪಾಲಿಟಿ ಸರಕಾರಿ ಕಾಗದಪತ್ರ ಅಥವಾ ಇದೇ ತರದ ವಿಶಿಷ್ಟಕಾಗದ ಪತ್ರಗಳಲ್ಲಿ ಮಾತ್ರ ಉಲ್ಲೇಖಿಸಲ್ಪಡುತ್ತವೆ. ಸರ್ವಸಾಧಾರಣವಾಗಿ ಈ ಊರಲ್ಲಿ ೬ ಭಾಗಗಳಿರುವವು. ಇವು ಆಯಾ ಭಾಗದಲ್ಲಿರುವ ಐತಿಹಾಸಿಕ ಇಮಾರತಿ ಅಥವಾ ಅನ್ಯವಸ್ತುಗಳಿಂದ ಕರೆಯಲ್ಪಡುತ್ತವೆ.

**೧ನೇಭಾಗ–ಗೋಳಗುಮಟ**–ಇದರಲ್ಲಿ ಗೋಳಗುಮಟ ಮತ್ತು ಅದರ ಸುತ್ತಲಿನ ಬಂಗಲೆಗಳು, ದನದ ದವಾಖಾನೆ, ಶಿಕಾರಖಾನೆ, ಪೇಟೆ, ಮಾಂಸಬಾವಡಿ, ಮತ್ತು ಅದರ ಸುತ್ತಲಿನ ಮನೆಗಳು ಇವುಗಳ ಸಮಾವೇಶವಾಗುತ್ತದೆ.

**೨ನೇಭಾಗ– ಜುಮ್ಮಾಮಶೀದೆಯ ಪೇಟೆ**—ಈ ಭಾಗದಲ್ಲಿ ಅಲ್ಲಾಪೂರ ಅಗಸೆಯಿಂದ ಅರಕಿಲ್ಲೆಯೊಳಗೆ ಹೋದ ಮಾರ್ಗದ ಸುತ್ತ

ಮುತ್ತಲಿನ ಇಮಾರತಿಗಳ ಸಮಾವೇಶವಾಗುವದು. ಇಲ್ಲಿ ಜುಮಾಮಸೀದೆ, ಮೇಹತರಮಹಾಲ, ಅಸಾರಮಹಾಲ, ಬಾರೀಕಮಾನ, ನಬಾಬ ಮಸೀದೆ, ಕನಾತೀಮಸೀದೆ ಮುಂತಾದ ಹಳೆಯ ಇಮಾರತಿಗಳಿರುತ್ತವೆ.

**೩ ನೇ ಭಾಗ-ಅರಕಿಲ್ಲೆ**—ಇಲ್ಲಿ ಮೊದಲು ಅರಮನೆಯಿತ್ತು. ಈಗ ಸರಕಾರಿ ಕಚೇರಿಗಳಿರುತ್ತವೆ.

**೪ ನೇ ಭಾಗ- ಹೊಸಪೇಟೆ**— ಇದಕ್ಕೆ ಮಾತ್ರ ಐತಿಹಾಸಿಕ ಹೆಸರು ಬಿದ್ದಿರುವದಿಲ್ಲ. ಆದರೂ ಇದರಲ್ಲಿ ಅಲ್ಲಿರೋಝಾ ಸಿಕಂದರ ಶಹನ ಗೋರಿ, ಸಣ್ಣ ಅಸಾರ (ಛೋಟಾಅಸಾರ) ಮುಂತಾದ ಇಮಾರತಿಗಳಿರುತ್ತವೆ. ಜಿಲ್ಲೆಯ ಸ್ಥಳವಾಗುವ ಮುಂಚೆ ಮತ್ತು ಆದನಂತರ ಕೆಲವು ದಿವಸಗಳ ವರೆಗೆ ಮುಖ್ಯ ಸಂತೆಯು ತಾಜಬಾವಡಿ ಪೇಟೆಯಲ್ಲಿ ಕೂಡುತಿತ್ತು. ಹೊಸತರದ ದೊಡ್ಡ ಇಮಾರತಿಗಳು ಇಲ್ಲಿ ಇರುವದರಿಂದ ಇದಕ್ಕೆ 'ಹೊಸಪೇಟೆ' ಎಂಬ ಹೆಸರು ಬಂದಿದೆ. ಇದಿಷ್ಟು, ಇದರ ಅರ್ಧ ಮೈಲಿನೊಳಗಿರುವ ಕಚೇರಿಗಳು, ಲೋಕೋಪಯೋಗಿ ಸಂಸ್ಥೆಗಳು, ಪೇಟೆ, ಧರ್ಮಶಾಲೆ, ಸಾರ್ವಜನಿಕ ಪುಸ್ತಕಾಲಯ, ಭೋಜನಶಾಲೆ, ವಿಶ್ರಾಂತಿಗೃಹ ಇವುಗಳಿಂದ ಈ ಊರು ಶಹರದಂತೆಯೇ ತೋರುತ್ತದೆ.

**೫ ನೆಯ ಭಾಗ**—ಇಲ್ಲಿ ಶಹಾಪೂರ ಪೇಟೆ, ಚಾಂದಬಾವಡಿ ಪೇಟೆಗಳು ಇರುತ್ತವೆ. ಈ ಭಾಗದಲ್ಲಿ ಚಾಂದಬೀಬಿಯ ಸ್ಮರಣಾರ್ಥ ಆ ಕಾಲದಲ್ಲಿ ಕಟ್ಟಿದ ಬಾವಿ, ಉಪ್ಪರಬುರುಜು ಮುಂತಾದವು ಇರುತ್ತವೆ.

**೬ ನೇ ಭಾಗವು**—ತಾಜಬಾವಡಿ ಮತ್ತು ಗುಂಡಬಾವಡಿ ಪೇಟೆಗಳುಳ್ಳದ್ದು. ಇಲ್ಲಿ ತಾಜಬಾವಡಿ, ಜೋಡುಗುಮಟ, ಮಕ್ಕಾ ಅಗಸೆ ಮುಂತಾದ ಇಮಾರತಿಗಳಿರುತ್ತವೆ.

ಇವುಗಳ ಹೊರತು ಕಿಲ್ಲೆಯ ಪಶ್ಚಿಮಕ್ಕೆ ಅದಕ್ಕೆ ಹತ್ತಿಯೇ ಜೋರಾಪುರವಿದ್ದು, ಅದನ್ನು ಸಹ ಶಹರದಲ್ಲಿಯೇ ಸಮಾವೇಶ ಮಾಡುತ್ತಾರೆ. ಕಿಲ್ಲೆಯ ದಕ್ಷಿಣ ಮತ್ತು ಉತ್ತರಭಾಗಕ್ಕೆ ಅನುಕ್ರಮವಾಗಿ

ಮನಗೋಳಿ ಅಗಸೆ, ಬ್ರಾಹ್ಮಣಿ ಅಗಸೆಗಳಿದ್ದು ಈ ಭಾಗದಲ್ಲಿ ಜನ ವಸ್ತಿಯು ಇಲ್ಲದ್ದರಿಂದ ಇವುಗಳಿಗೆ ಇನ್ನೂ ಹೆಸರು ಬಿದ್ದಿರುವದಿಲ್ಲ.

ಯಾರಿಗೆ ಎರಡನೆಯ ಕಡೆಗೆ ಇಳಿದುಕೊಳ್ಳಲಿಕ್ಕೆ ಅನುಕೂಲತೆ ಇರುವದಿಲ್ಲವೋ ಅವರು ಹೊಸ ಬಾಜಾರದಲ್ಲಿ ಮ್ಯುನಿಸಿಪಾಲಿಟಿಯ ಉತ್ತಮ ಧರ್ಮಶಾಲೆಯಲ್ಲಿಯೇ ಇಳಿದುಕೊಳ್ಳುತ್ತಾರೆ. ಇದಕ್ಕೆ ಹೊಂದಿಯೇ ಯುನಿಯನ್ ಕ್ಲಬ್ಬ ಮತ್ತು ಸಾರ್ವಜನಿಕ ಪುಸ್ತಕಾಲಯ ಗಳ ಸುಂದರವಾದ ಕಟ್ಟಡವಿರುತ್ತದೆ. ಇಲ್ಲಿ ದೊಡ್ಡ ದೊಡ್ಡ ಸಂಸ್ಥಾನಿಕ ರಿಗೆ ಇಳಿದುಕೊಳ್ಳಲಿಕ್ಕೆ ಅನುಕೂಲತೆ ಇರುತ್ತದೆ. ಉತ್ತಮ ಭೋಜನಾ ಲಯಗಳೂ, ವಿಶ್ರಾಂತಿಗೃಹಗಳೂ ಸಮೀಪದಲ್ಲಿಯೇ ಇರುತ್ತವೆ.

## ೨ನೆಯ ಪ್ರಕರಣ.

## ಸಂಕ್ಷಿಪ್ತೇತಿಹಾಸವು.

ಪೌರಾಣಿಕ ಕಾಲದಲ್ಲಿಯೂ, ಅನಂತರ ಕ್ರಿ. ಶ. ೫ನೇ ಶತಮಾನದ ಮುಂಚೆಯೂ, ಈ ವಿಜಾಪುರದ ಪ್ರದೇಶವು ಮಹತ್ವದ್ದಿದ್ದಂತೆ ಕಂಡು ಬರುತ್ತದೆ. ಮಹಾಕೂಟವೆಂಬ ಹೆಸರಿನ ಕ್ಷೇತ್ರದಲ್ಲಿ ಅಗಸ್ತ್ಯಋಷಿಯೂ, ಮುಚಖಿಂಡಿಯ ಗುಡ್ಡದ ಮೇಲಿನ ಗುಹೆಯಲ್ಲಿ ಮುಚಕುಂದಋಷಿಯೂ, ವನವಾಸದಲ್ಲಿರುವಾಗ ಸೀತೆಮನಿ ಎಂಬಲ್ಲಿ ಸೀತೆಯೂ ವಾಸವಾಗಿದ್ದ ರೆಂದು ದಂತಕಥೆಗಳಿಂದ ತಿಳಿಯುತ್ತದೆ.

ಇಲ್ಲಿಯ ಅರಕಿಲ್ಲೆಯೊಳಗಿನ ಹಳೇ ಪದ್ಧತಿಯ ಗುಡಿಗಳಂತಹ ಜಕಣಾಚಾರ್ಯರ ಗುಡಿಗಳನ್ನು ಇದೇ ಜಿಲ್ಲೆಯಲ್ಲಿ ಪಟ್ಟದ ಕಲ್ಲು, ಅಯ್‌ಹೊಳೆ, ಬಾದಾಮಿ ಎಂಬಲ್ಲಿ ಬೇಕಾದಷ್ಟು ನೋಡಬಹುದು. ಪಟ್ಟದ ಕಲ್ಲು, ಅಯ್‌ಹೊಳೆ, ಬಾದಾಮಿ ಇವು ಮುಸಲ್ಮಾನರ ಹಾವಳಿಗೆ ಈಡಾಗಲಿಲ್ಲ. ಆದ್ದರಿಂದ ಇಲ್ಲಿಯ ಗುಡಿಗಳು ನಾಶವಾಗಿಲ್ಲ. ವಿಜಾ ಪುರದಲ್ಲಿ ಮುಸಲ್ಮಾನರ ಹಾವಳಿಯು ೨೦೦ ವರ್ಷಗಳಿಂದ ಹೆಚ್ಚು ಕಾಲ

ನಡೆದುದರಿಂದಲೂ, ಆಗ ಅವರ ಅಧಿಕಾರವು ದಿನದಿನಕ್ಕೆ ಹೆಚ್ಚುತಿದ್ದುದರಿಂದಲೂ, ಅವರು ಅಲ್ಲಿ ಮೊದಲಿದ್ದ ಕಟ್ಟಡಗಳನ್ನೆಲ್ಲ ನಾಶಪಡಿಸಿ, ಅವುಗಳ ಉಪಯೋಗವನ್ನು ಮಶೀದೆ, ಅರಕಿಲ್ಲೆ ಶಹರದ ಸುತ್ತಲಿನ ಕೋಟೆ ಇವುಗಳಿಗಾಗಿ ಮಾಡಿಕೊಂಡದ್ದರಿಂದಲೂ, ಉಳಿದ ಕೆಲವು ಇಮಾರತಿಗಳು (ದೇವಾಲಯುಗಳು) ಶಿಲಾಲೇಖಗಳು ಇವುಗಳ ಆಧಾರದಿಂದ ನೋಡಲು ಈ ಊರು ಇ. ಸಂ. ೧೧೦೦ಕ್ಕೆ ಮುಂಚೆಯೇ ಪ್ರಸಿದ್ಧವಾಗಿದ್ದಂತೆ ಕಂಡು ಬರುತ್ತದೆ.

ಬಾದಾಮಿ(ವಾತಾಪಿ)ಯ ಚಾಲುಕ್ಯರ ನಾಶವಾದ ಮೇಲೆ ಈ ಪ್ರದೇಶದ ಆಧಿಪತ್ಯವು ಯಾದವರ ಕಡೆಗೆ ಹೋಯಿತು. ಯಾದವರು ಕೆಲಕಾಲ ತಮ್ಮ ರಾಜಧಾನಿಯನ್ನು ಇದೇ ಊರಲ್ಲಿ ಮಾಡಿದ್ದರಂತೆ. ಆ ಮೇಲೆ ದೇವಗಿರಿ ಎಂಬಲ್ಲಿ ಮಾಡಿದರು. ದೇವಗಿರಿಯ ಯಾದವರನ್ನು ಅಲ್ಲಾವುದ್ದೀನ ಖಿಲಜಿ ಎಂಬವನು ೧೩೧೦ರಲ್ಲಿ ಸೋಲಿಸಲು, ಈ ಭಾಗದ ಆಧಿಪತ್ಯವು ಮುಸಲ್ಮಾನರ ಕಡೆಗೆ ಹೋಯಿತು. ಇದು ಅವರ ಕಡೆಗೆ ೧೩೧೩ರಿಂದ ೧೭೬೦ರ ವರೆಗೆ ಇತ್ತು.

ವಿಜಾಪುರದ ಇತಿಹಾಸದಲ್ಲಿ ಅದರ ಹತ್ತರಿರುವ ಭಾಗದ ಇತಿಹಾಸದ ಅವಶ್ಯಕತೆಯಿಲ್ಲ. ಆದರೂ ವಿಜಾಪುರ ಪಟ್ಟಣವನ್ನು "ಯಾರು ಸ್ಥಾಪಿಸಿದರು? ಎಂಬ ವಿಷಯದಲ್ಲಿ ಗ್ರಂಥಕಾರರೊಳಗೆ ಭಿನ್ನಮತವಿರುವದರಿಂದ ಆ ಗೊಂದಲವನ್ನು ಹೋಗಲಾಡಿಸಲು ಈ ಭಾಗದ ಇತಿಹಾಸವನ್ನು ಕೊಡಬೇಕಾಯಿತು. ಮಿ. ಫ್ಲೀಟಸಾಹೇಬರೂ ಕೆಲ ಗ್ರಂಥಕಾರರೂ ಈ ಪಟ್ಟಣವನ್ನು ಯಾದವರು ಸ್ಥಾಪಿಸಿದರೆಂದು ಅನ್ನುತ್ತಾರೆ. ಡಾ. ಭಾಂಡಾರಕರರ ಇತಿಹಾಸದಲ್ಲಿ ಈ ಶಹರದ ಉಲ್ಲೇಖವೇ ಇರುವದಿಲ್ಲ. ವಿಜಾಪುರವೆಂಬ ಹೆಸರಿನ ಊರುಗಳು ಮೂರು ಇರುವದರಿಂದ ಶಿಲಾಲೇಖಗಳಲ್ಲಿ ವರ್ಣಿಸಿದ ವಿಜಾಪುರವು ಯಾವುದೆಂಬುದು ಗೊತ್ತಾಗುವದಿಲ್ಲ. ಗುಜರಾಥದಲ್ಲಿ ಪ್ರಾಚೀನ ಕಾಲದಿಂದ ಒಂದು ವಿಜಾಪುರವಿದೆ. ವಿಜಯನಗರದ ರಾಜಧಾನಿಯ ಹೆಸರು ವಿಜಾಪುರವೆಂದಿದೆ.

ಮತ್ತು ಈ ನಮ್ಮ ಪ್ರಕೃತ ವಿಜಾಪುರವೊಂದು. ಈ ವಿಜಾಪುರವನ್ನು ಆದಿಲಶಹನು ಸ್ಥಾಪಿಸಿದನೆಂದು ಹಿಂದೆ ಹೇಳಿರುವೆವು. ಈ ವಿಷಯವಾಗಿ ಮತಭೇದವಾಗುವ ಸಂಭವವಿದೆ. ಈ ಶಹರದ ಸ್ಥಾಪನೆಯಾಗುವ ಮುಂಚೆ ಇಲ್ಲಿ ಐದು ಸಣ್ಣ ಹಳ್ಳಿಗಳು ಇದ್ದವು. ಅವುಗಳಲ್ಲಿ ಒಂದಾದ ಬಿಜ್ಜನಹಳ್ಳಿ ಎಂಬುವುದು ಅರಕಿಲ್ಲೆಯ ಸ್ಥಳದಲ್ಲಿತ್ತು. ಮುಸಲ್ಮಾನರ ಕಾಲದಲ್ಲಿ ಆದಿಲಶಹನಿಗಿಂತ ಮುಂಚಿನ ಕೆಲ ಸರದಾರರಿಗೆ ವಿಜಾಪುರೇ ಎಂದು ಕರೆದ ಉಲ್ಲೇಖವಿದೆ. ಮುಸಲ್ಮಾನರಿಗೆ 'ಹಳ್ಳಿ' ಎಂಬ ಶಬ್ದವು ಸರಿಯಾಗಿ ತೋರದ್ದರಿಂದ "ವಿಜ" ಎಂಬ ಶಬ್ದಕ್ಕೆ "ಪುರ"ವೆಂಬ ಶಬ್ದ ವನ್ನು ಜೋಡಿಸಿರಬೇಕೆಂದು ನಮ್ಮ ಅನುಮಾನವಿದೆ.

ಇ. ಸ. ೧೩೧೦ರಲ್ಲಿ ಈ ವಿಜ್ಜನಹಳ್ಳಿಯ ಕಡೆಗೆ ಖಿಲಜಿ ವಂಶದ ಕೆಲವು ಜನರು ಬಂದಿರಬೇಕೆಂದು ತೋರುತ್ತದೆ. ಅವರ ಒಬ್ಬ ಸರ ದಾರನು ಇಲ್ಲಿ ವಾಸಮಾಡಿಕೊಂಡಿದ್ದನು, ಮತ್ತು ಇಲ್ಲಿಯೇ ಮರಣ ವನ್ನು ಹೊಂದಿದನು. (ಮಲಿಕಾಫರನ ಮಗನ ಗೋರಿಯು ಇಲ್ಲಿ ಇರುವದು).

ದಿಲ್ಲಿಯ ಸಿಂಹಾಸನವು ಖಿಲಜಿ ವಂಶದವರಿಂದ ತಗಲಕ ವಂಶದವರ ಕಡೆಗೆ ಹೋದ ಮೇಲೆ ಇಲ್ಲಿಯ ಆಧಿಪತ್ಯವಾದರೂ ಅವರ ಕಡೆಗೆ ಹೋಯಿತು. ತಗಲಕ ವಂಶದವರು ರಾಜ್ಯವನ್ನಾಳುವಾಗ ಇಲ್ಲಿಯ ವ್ಯವಸ್ಥೆಯು ದೇವಗಿರಿಯ ಸುಭೇದಾರನ ಕಡೆಗೆ ಇದ್ದಿತೋ, ಅಥವಾ ಅಹಮ್ಮದಾಬಾದದ ಸುಭೇದಾರನ ಕಡೆಗೆ ಇದ್ದಿತೋ ಎಂಬುವುದು ನಿಶ್ಚಿತವಾಗಿ ತಿಳಿಗುಬರುವದಿಲ್ಲ. ಮುಹಮ್ಮದ ತಗಲಕನು ದಕ್ಷಿಣ ದೊಳಗಿನ ತನ್ನ ಸರದಾರರ ಬಂಡಾಯುವನ್ನು ಮುರಿಯಲಿಕ್ಕೆ ಬಂದಾಗ ತನ್ನ ಒಬ್ಬ ಸರದಾರನಿಗೆ ವಿಜಾಪುರೇ ಎಂದು ಬರೆದ ಲೇಖವು ಸಿಗುತ್ತದೆ.

ತಗಲಕ ರಾಜರ ಅಧಿಕಾರವನ್ನು ಮನ್ನಿಸದೆ ಬ್ರಾಹ್ಮಣಿ ಅರಸರು ತಮ್ಮ ಸ್ವತಂತ್ರವಾದ ರಾಜ್ಯವನ್ನು ಕಲಬುರ್ಗೆಯಲ್ಲಿ ೧೩೪೭ರಲ್ಲಿ

ಸ್ಥಾಪಿಸಿದರು. ಇವರಲ್ಲಿ ಇಬ್ಬರು ಇಲ್ಲವೆ ಮೂವರು ಅರಸರ ಆಳಿಕೆಯಲ್ಲಿ ಈ ಶಹರದ ಹೆಸರು ದೊರೆಯುವಂತಿಲ್ಲ. ಮಹಮ್ಮದ ಬ್ರಾಹ್ಮಣಿ ಬಾದಶಹನ ಆಳಿಕೆಯಲ್ಲಿ ವಿಜಾಪುರದ ಹೆಸರು ಸಿಗುತ್ತದೆ. ಹಿಂದಿನಿಂದ ಈ ವಿಜಾಪುರವನ್ನು ತನ್ನದೊಂದು ಸುಭೆಯನ್ನೇ ಮಾಡಿ ಅದಕ್ಕೊಬ್ಬ ಸುಭೇದಾರನನ್ನೇ ನೇಮಿಸಿದ್ದರಿಂದಲೇ ಮೇಲಿನ ಉಲ್ಲೇಖವು ಬಂದಿರಬಹುದು. ಮುಂದೆ ಈ ಸುಭೇದಾರನೇ ಈ ಭಾಗದ ಸ್ವತಂತ್ರ ಅರಸನಾದನೆಂಬುದು ಅವನ ಕಾಲದ ಸಂಗತಿಯಿಂದ ತಿಳಿದುಬರುತ್ತದೆ. [೧೪೯೦ ಮುತಾಬಿಕ.]

ಈ ಶಹರಕ್ಕೆ ನಿಯಮಿಸಲ್ಪಟ್ಟ ಸುಭೇದಾರನು ಬಹಳ ನ್ಯಾಯಪ್ರಿಯನಿದ್ದುದರಿಂದ ಅವನಿಗೆ ಬ್ರಾಹ್ಮಣಿ ಅರಸನು "ಆದಿಲ" ಎಂಬ ಬಿರುದನ್ನು ಕೊಟ್ಟಿದನು. ಆದಿಲ ಶಬ್ದದ ಅರ್ಥವು ನ್ಯಾಯಿ ಎಂದಿರುತ್ತದೆ. ಈ ಬಿರುದನ್ನೇ ಇಟ್ಟುಕೊಂಡು ಆ ಸುಭೇದಾರನು ಮುಂದೆ ತನ್ನ ರಾಜ್ಯಕ್ಕೆ 'ಆದಿಲಶಾಹಿ' ಎಂದು ಕರೆದನು. ಇತಿಹಾಸದಲ್ಲಿ ಈ ಮನೆತನದ ಅರಸರಿಗೆ ಆದಿಲಶಹ ಎಂದೂ ಅವನ ರಾಜ್ಯಕ್ಕೆ ಆದಿಲಶಾಹಿ ಎಂದೂ ಅನ್ನುತ್ತಾರೆ.

ಈ ಮನೆತನದ ಮೂಲಪುರುಷನು **ಯುಸುಫ** ಎಂಬವನು. ಇವನಿಗೇ ಬಿರುದು ಶಿಕ್ಕಿದ್ದರಿಂದ "ಯುಸುಫ ಆದಿಲಖಾನ" ಬಳಿಕ ಯುಸುಫ ಆದಿಲಶಹ ಎಂಬ ಹೆಸರುಗಳು ಬಂದವು. ಈ ಮನೆತನದಲ್ಲಿ ೮ ಮಂದಿ ಅರಸರು ಆಗಿಹೋದರು. ತಮ್ಮ ಹೆಸರು ಉಳಿಯಬೇಕೆಂದು ಈ ಅರಸರು ಯಾವ ಇಮಾರತಿಗಳನ್ನೂ, ಮಸೀದೆಗಳನ್ನೂ ಕೆರೆಭಾವಿಗಳನ್ನೂ ಕಟ್ಟಿಸಿದರೋ ಅವುಗಳಿಂದಲೇ ಈ ಶಹರಕ್ಕೆ ಪ್ರಸಿದ್ಧಿಯು ಬಂದಿರುತ್ತದೆ. ಈ ಬಾದಶಹರ ಕಾಲವನ್ನು ಅವರು ಕಟ್ಟಿಸಿದ ಇಮಾರತಿ ಮುಂತಾದವುಗಳನ್ನು ಕೆಳಗೆ ಕೊಡುತ್ತೇವೆ:—

೧. **ಯುಸುಫ ಆದಿಲಶಹ:**—ಇ. ಸ. ೧೪೯೦ರಿಂದ ೧೫೧೦ರ ವರೆಗೆ ಚೀನಿಮಹಾಲ, ಅರಕಿಲ್ಲೆ, ಅಲ್ಲಾಪುರ.

**೨. ಇಸ್ಮಾಯಿಲ್ ಆದಿಲಶಹ:**—೧೫೧೦ರಿಂದ ೧೫೩೪ ಚಂಪಾ ಮಹಾಲ (ಇದು ಈಗ ಎಲ್ಲಿಯೂ ಕಾಣಿಸುವದಿಲ್ಲ.)

**೩. ದೊಡ್ಡ ಇಬ್ರಾಹಿಮ:**—೧೫೩೪ರಿಂದ ೧೫೫೭ ಸೋಳಾ ಖಾಂಬೀ (?)

**೪. ದೊಡ್ಡ ಅಲ್ಲಿ ಆದಿಲಶಹ:**—೧೫೫೭-೧೫೮೦. ಶಹರದ ಸುತ್ತಲಿನ ೬॥ ಮೈಲಿನ ಕೋಟೆ, ಜುಮ್ಮಾಮಸೀದೆ, ಉಪ್ಪರಬುರುಜು, ಓಣಿ ಓಣಿಗೆ ನೀರಿನ ನಳಗಳು.

**೫. ಸಣ್ಣ ಇಬ್ರಾಹಿಮ್:**—ಇವನು ಜಗದ್ಗುರುವೆಂಬ ಹೆಸರಿನಿಂದ ಇತಿಹಾಸದಲ್ಲಿ ಪ್ರಸಿದ್ಧನಿರುತ್ತಾನೆ (೧೫೮೦-೧೬೨೭). ಇಬ್ರಾಹಿಮ ರೋಝಾ, ತಾಜಬಾವಡಿ, ಜಂಜಿರಿ ಮಸೀದೆ, ಆನಂದಮಹಾಲ, ತೊರವೆ ಮತ್ತು ಅಲ್ಲಿಯ ಕೆಲವು ಇಮಾರತಿಗಳು.

**೬. ಮಹಮ್ಮೂದಶಹ:**—೧೬೨೭-೧೬೬೪. ಗೋಳಗುಮಟ, ಮೇಹತರಮಹಾಲ, ಅಸಾರಮಹಾಲ, ಅದಾಲತಮಹಾಲ, ಬೇಗಮ್ ತಲಾವ ಮುಂತಾದವುಗಳು.

**೭. ಸಣ್ಣ ಅಲ್ಲಿ ಆದಿಲಶಹ:**—೧೬೬೪-೧೬೭೨. ಅಲಿ ರೋಝಾ, ಆರಸೇಮಹಾಲ.

**೮. ಶಿಕಂದರಶಹ:**—೧೬೭೨—೧೬೮೬. ಏನೂ ಕಟ್ಟಿಸಿಲ್ಲ.

ವಿಜಯನಗರದ ನಾಶವಾದ ಅನಂತರ ವಿಜಾಪುರದ ವೈಭವವು ಬೆಳೆಯಿತು. ಆ ಕಾಲದಲ್ಲಿ ಅಲ್ಲಿಯ ಜನಸಂಖ್ಯೆಯು ೧೮ ಲಕ್ಷವಿದ್ದಿತೆಂದು ಹೇಳುತ್ತಾರೆ. ವಿಜಯನಗರದ ನಾಶವನ್ನು ಮಾಡಿದವನು ದೊಡ್ಡ ಅಲ್ಲಿಯೇ! ಒಂದು ಕ್ಷುಲ್ಲಕ ಕಾಣದಿಂದ ಅಲ್ಲಿಯ ರಾಮರಾಜನಿಗೂ ಇವನಿಗೂ ವಿರೋಧವು ಬಂತು. ಅದರ ಕಾರಣವೇನಂದರೆ:—ಅಲ್ಲಿಯು ಒಮ್ಮೆ ವಿಜಯನಗರಕ್ಕೆ ಹೋದಾಗ ರಾಮರಾಜನು ಸೀಮೆಯ ವರೆಗೆ

ಅವನನ್ನು ಕಳಿಸಲಿಕ್ಕೆ ಬರಲಿಲ್ಲೆಂಬುವದೇ! ಅಲ್ಲಿಯ ತರುವಾಯ ಸಣ್ಣ ಇಬ್ರಾಹಿಮ ಮತ್ತು ಮಹಮ್ಮೂದಶಹ ಇವರೇ ಶಹರದಲ್ಲಿ ದೊಡ್ಡ ಇಮಾರತಿಗಳನ್ನು ಕಟ್ಟಿಸಿದರು.

ಶಿವಾಜಿ ಮಹಾರಾಜನು ಈ ಆದಿಲಶಾಹಿಯನ್ನು ತೀರ ಹಣ್ಣಿಗೆ ತಂದನು. ಈ ಶಿವಾಜಿ ಮಹಾರಾಜನ ಮಗನು ಮೂರ್ಖತನದಿಂದ ಕಲುಷನೆಂಬ ಬ್ರಾಹ್ಮಣನ ಮತ್ತು ತುಳಸೀ ಎಂಬ ಸ್ತ್ರೀಯ ವಶವಾಗಿ ಈ ಬಲಗುಂದಿದ ಆದಿಲಶಾಹಿಯೆಂಬ ಇಮಾರತಿಯನ್ನು ತನ್ನ ಉಪಭೋಗಕ್ಕೆ ತೆಗೆದುಕೊಳ್ಳದೆ ಔರಂಗಜೇಬನೆಂಬ ಸಿಡಿಲಿಗೆ ಒಪ್ಪಿಸಿ ಅದರೊಡನೆ ತನ್ನ ನಾಶವನ್ನೂ ಮಾಡಿಕೊಂಡನು.

ಔರಂಗಜೇಬನು ದಕ್ಷಿಣದ ಮುಸಲ್ಮಾನಿ ರಾಜ್ಯಗಳನ್ನು ಮುರಿಯಬೇಕೆಂಬ ಹವಣಿಕೆಯಲ್ಲಿದ್ದನು. ಏಕಂದರೆ ಈ ರಾಜರು ಹಿಂದುಗಳನ್ನು ಮುಸಲ್ಮಾನರನ್ನು ಮಾಡದೆ ಅವರ ಧರ್ಮವನ್ನು ಮನ್ನಿಸುತಿದ್ದರು.

ದಕ್ಷಿಣದೊಳಗಿನ ಎಲ್ಲ ರಾಜ್ಯಗಳನ್ನು ಮುರಿದು ಅವುಗಳ ವ್ಯವಸ್ಥೆಗಾಗಿ ವಿಜಾಪುರದಲ್ಲಿ ತನ್ನ ಮಗನನ್ನು ಗಾದಿಯ ಮೇಲೆ ಕುಳ್ಳಿರಿಸಿ ಬಳಿಕ ಉತ್ತರದ ದಾರಿಯನ್ನು ಹಿಡಿಯಬೇಕೆಂದು ಔರಂಗಜೇಬನ ಮನಸ್ಸಿತ್ತು. ಆದರೆ ಔರಂಗಜೇಬನು ಇನ್ನೂ ದಕ್ಷಿಣದಲ್ಲಿ ಇರುತ್ತಿರುವಾಗಲೇ ಅಂದರೆ ಮುಂದೆ ಎರಡೇ ವರ್ಷದ ಅವಧಿಯಲ್ಲಿ ಈ ಶಹರದಲ್ಲಿ "ಕರಿಜ್ವರ", ಎಂಬ ಹೆಸರಿನ ರೋಗವು ಉದ್ಭವಿಸಿತು. ಈ ರೋಗವು ೧೬೬೫ರಲ್ಲಿ ಲಂಡನ ಶಹರದಲ್ಲಾದ ಪ್ಲೇಗದ ಹಾವಳಿಗಿಂತ ಹೆಚ್ಚು ಹಾವಳಿಯನ್ನು ಮಾಡಿತು. ೧೪ ಲಕ್ಷ ಜನ ಸಂಖ್ಯೆಯು ಹೋಗಿ ೩೦ ಸಾವಿರಕ್ಕೆ ಬಂತು. ಈ ರೋಗದಿಂದ ಮರಣಹೊಂದಿದ ಔರಂಗಜೇಬನ ಹೆಂಡತಿಗೆ ಮಣ್ಣು ಕೊಡಲಿಕ್ಕೆ ಹೋದವರಲ್ಲಿ ಯಾರೂ ತಿರುಗಿ ಬರಲಿಲ್ಲೆಂದು ಹೇಳುತ್ತಾರೆ. ಅವರೆಲ್ಲರೂ ಇದೇ ರೋಗದಿಂದ ಅಲ್ಲಿಯೇ ತೀರಿಕೊಂಡರಂತೆ! ಮುಂದೆ ಕೆಲವು ವರ್ಷ ವಿಜಾಪುರದಲ್ಲಿ ಭಯಂಕರ

ಬರವು ಬಿದ್ದುದರಿಂದ ಅದರ ಕಡೆಗೆ ಯಾರೂ ಕಣ್ಣೆತ್ತಿ ಸಹ ನೋಡಲಿಲ್ಲ. ಹೈದರಾಬಾದದಲ್ಲಿರುವ ಮೊಗಲರ ಸುಭೇದಾರನ ವಶಕ್ಕೆ ಈ ಶಹರವು ಹೋಯಿತು. ಮುಂದೆ ನಿಜಾಮ ಉಲ್ಮುಲ್ಕನು ಹೈದರಾಬಾದದಲ್ಲಿ ಸ್ವತಂತ್ರ ರಾಜ್ಯವನ್ನು ಸ್ಥಾಪಿಸಿದ್ದರಿಂದ (ಇ. ಸ. ೧೭೪೬) ಈ ಶಹರ ವಾದರೂ ಅವನ ವಶದಲ್ಲಿಯೇ ಉಳಿಯಿತು. ಉದಯಗಿರಿ ಕಾಳಗದಲ್ಲಿ ನಿಜಾಮ ಉಲ್ಮುಲ್ಕನ ಮಗನನ್ನು ಪೇಶ್ವೆಯವರು ಸೋಲಿಸಲು, ಆ ಕಾಲದ ಒಪ್ಪಂದಕ್ಕನುಸರಿಸಿ ವಿಜಾಪುರವು ಪೇಶ್ವೆಯರ ವಶಕ್ಕೆ ಬಂದಿತು (೧೭೬೦). ಇದು ಅವರ ಕಡೆಗೆ ೧೮೧೮ರ ವರೆಗೆ ಇತ್ತು. ಈ ಅವಧಿ ಯಲ್ಲಿ ಇಲ್ಲಿಯ ಇಮಾರತಿಯ ಉತ್ತಮ ಕಟ್ಟಿಗೆಗಳನ್ನು ಪುಣೆಗೆ ಒಯ್ದು ಶನಿವಾರವಾಡೆಗೆ ಭರತಿಯನ್ನು ಹಾಕಿದರೆಂದು ಹೇಳುತ್ತಾರೆ.

ಕಡೆಯ ಪೇಶ್ವೆಯು ಬ್ರಹ್ಮಾವರ್ತಕ್ಕೆ ಹೋದ ಬಳಿಕ ಇಂಗ್ಲಿಷರು ಈ ಶಹರವನ್ನು ಸಾತಾರೆಯ ಅರಸನಿಗೆ ಕೊಟ್ಟರು. ಈ ಅವಧಿಯಲ್ಲಿ ವಿಶೇಷ ಸಂಗತಿಗಳೇನೂ ಜರಗಲಿಲ್ಲ. ಸಾತಾರೆಯ ರಾಜ್ಯವು ಖಾಲಸಾ ಆದಕಾಲದಲ್ಲಿ ವಿಜಾಪುರವು ಇಂಗ್ಲಿಷರ ಕಡೆಗೆ ಬಂದಿತು. ಆ ಕಾಲದಲ್ಲಿ ಎಷ್ಟೋ ನಿರುಪಯೋಗಿ ವಸ್ತುಗಳನ್ನು ಲಿಲಾವು ಮಾಡಿದರು.

ವಿಜಾಪುರವು ಇಂಗ್ಲಿಷರ ವಶಕ್ಕೆ ಬಂದ ಕಾಲದಲ್ಲಿ ಅದು ಭಯಂ ಕರವಾಗಿ ಹಾಳು ಬಿದ್ದ ದೊಡ್ಡದೊಡ್ಡ ಇಮಾರತಿಗಳಿಂದ ತುಂಬಿದ ಹಳ್ಳಿ ಯಾಗಿತ್ತು. ಮುಳ್ಳುಗಳ್ಳಿಯು ತನ್ನ ವಂಶವನ್ನು ನಾಲ್ಕೂ ಕಡೆಗೆ ಹಬ್ಬಿ ಸಿತ್ತು. ತಾಲೂಕಿನ ಸ್ಥಳವಾದಾಗ ಸಹ ಈ ಶಹರದ ವ್ಯವಸ್ಥೆಯು ಸರಿ ಯಾಗಿರಲಿಲ್ಲ. ೧೮೮೪ರಲ್ಲಿ ಈ ಶಹರದಿಂದ ಹಾಯ್ದು ಹೋಗುವ ಉಗೆ ಬಂಡಿಯ ಮಾರ್ಗವು ಆಯಿತು. ಉಗೆಬಂಡಿಯಿಂದ ಬಹು ದೂರವಿರುವ ಕಲಾದಗಿಯು ಆ ಕಾಲದಲ್ಲಿ ಜಿಲ್ಲೆಯ ಮುಖ್ಯ ಸ್ಥಳವಾಗಿತ್ತು. ಉಗೆ ಬಂಡಿಯ ದಾರಿಯಲ್ಲಿರುವದರಿಂದಲೂ, ಇಲ್ಲಿ ದೊಡ್ಡ ದೊಡ್ಡ ಇಮಾರತಿ ಗಳಿರುವದರಿಂದಲೂ, ಬ್ರಿಟಿಷ ಸರಕಾರದವರು ೧೮೮೫ರಲ್ಲಿ ಇದನ್ನು ಜಿಲ್ಲೆಯ ಮುಖ್ಯ ಸ್ಥಳವಾಗಿ ಮಾಡಿದರು. ಜಿಲ್ಲೆಯ ಸ್ಥಳವನ್ನು

ಮಾಡುವ ಕಾಲದಲ್ಲಿ ಈ ಶಹರದ ಪುನರುಜ್ಜೀವನಕ್ಕಾಗಿ ೫—೬ ಲಕ್ಷ ರೂಪಾಯಿಗಳನ್ನು ವ್ಯಯ ಮಾಡಬೇಕಾಯಿತು. ಲಾರ್ಡ ಕರ್ಝನ್ ಸಾಹೇಬರು ಸ್ವತಃ ಸ್ಥಾಪಿಸಿದ "ಪ್ರಾಕ್ತನವಿಮರ್ಶ" ಖಾತೆಯಿಂದ ಸುಮಾರು ೨ ಲಕ್ಷ ರೂಪಾಯಿಗಳು ಈ ಪಟ್ಟಣದ ಪುನರುಜ್ಜೀವನಕ್ಕಾಗಿ ಖರ್ಚು ಮಾಡಲ್ಪಟ್ಟವು.

ಮಧ್ಯದಲ್ಲಿ ೧೮೮೫ರಿಂದ ೧೮೯೭ ವರೆಗೆ ಈ ಶಹರದಲ್ಲಿ ರೋಗವು ವಿಶೇಷವಾಗಿ ಹಬ್ಬಿತ್ತು. ಇದಕ್ಕೆ ಸುತ್ತಲಿನ ಕಂದಕದೊಳಗಿನ ನೀರೇ ಕಾರಣವೆಂದೆಣಿಸಿ ಅದನ್ನು ಹೋಗಲಾಡಿಸಿದ್ದರಿಂದ ಊರೊಳಗಿನ ಬಾವಿಗಳಿಗೆ ಬರುವ ಸೆಲೆಗಳು ಬತ್ತಿ ನೀರಿನ ಸಂಗ್ರಹವು ಕಡಿಮೆಯಾಯಿತು. ದುಷ್ಕಾಲವಂತೂ ಐದಾರು ವರ್ಷ ಚನ್ನಾಗಿ ಪ್ರಕಟವಾಗಿಯೇ ಇತ್ತು. ತಾಜಬಾವಡಿಯೊಂದರ ಹೊರತು ಊರಲ್ಲಿ ನೀರು ದೊರೆಯದಂತಾಯಿತು. ಪುನಃ ಇಲ್ಲಿಯ ಜಿಲ್ಲೆಯ ಸ್ಥಳವನ್ನೇ ಬೇರೆ ಕಡೆಗೆ ಎತ್ತುವ ಪ್ರಸಂಗವು ಬರುವದೋ ಏನೋ ಎಂಬ ಸಂಶಯವು ಬರ ತೊಡಗಿತು. ಆ ಕಾಲದ ದೀನಾವಸ್ಥೆಯು ಅವರ್ಣನೀಯವೇ ಸರಿ!

ಕರ್ಮ-ಧರ್ಮ ಸಂಯೋಗದಿಂದ ವಿಜಾಪುರ ಮ್ಯುನಿಸಿಪಾಲಿಟಿಯಲ್ಲಿ ಯೋಗ್ಯ ಸಭಾಸದರು ಬಂದದ್ದರಿಂದಲೂ ಸರಕಾರದವರು ಮಿ| ವಿಶ್ವೇಶ್ವರಯ್ಯನವರನ್ನು ಈ ಭಾಗದ ಸುಪರಿಂಟಂಡೆಂಟ ಇಂಜಿನಿಯರರನ್ನಾಗಿ ನಿಯಮಿಸಿದ್ದರಿಂದಲೂ, ಶಹರದ ಸುದೈವವು ತೆರೆಯಿತೆಂದು ಹೇಳಬೇಕಾಗುವದು. ಅವರು ಶೋಧಿಸಿಕೊಟ್ಟ ಸ್ಥಳದಲ್ಲಿ ಏಳು ಲಕ್ಷ ರೂಪಾಯಿಗಳನ್ನು ವೆಚ್ಚಮಾಡಿ, ಕೆರೆಯನ್ನು ಕಟ್ಟಿಸಿದರು. ಇದರಿಂದ ಶಹರದ ಜನರ ದೀನಾವಸ್ಥೆಯು ದೂರಾಯಿತು.



## ೩ನೆಯ ಪ್ರಕರಣ.

## ನೋಡತಕ್ಕ ಕಟ್ಟಡಗಳೂ ವಸ್ತುಗಳೂ.

### ಕೋಟೆಯ ವರ್ಣನೆ.



ವಿಜಯನಗರ ರಾಜ್ಯವನ್ನು ನಾಶಗೊಳಿಸಿದನಂತರ ಅಲ್ಲಿ ದೊರೆತ ಲೂಟಿಯಿಂದ ಮೊದಲನೆಯ ಅಲ್ಲಿ ಆದಿಲಶಹನು ಎರಡುವರೆ ವರ್ಷದಲ್ಲಿ ಈ ಊರ ಸುತ್ತಲಿನ ಕೋಟೆಯನ್ನು ಕಟ್ಟಿಸಿದನು. ಈ ಕೋಟೆಯ ಪರಿಘವು ೬॥ ಮೈಲು ಇದ್ದು, ಇದಕ್ಕೆ ೯೩ ಬುರುಜುಗಳೂ, ಮೂವತ್ತ ಕ್ಕಿಂತ ಹೆಚ್ಚು ಅಗಸೆಗಳೂ ಇರುತ್ತವೆ. ಇದನ್ನು ಕಟ್ಟುವ ಕೆಲಸವು ಬೇರೆ ಬೇರೆ ಸರದಾರರ ಕಡೆಗೆ ಒಪ್ಪಿಸಲ್ಪಟ್ಟಿದ್ದರಿಂದ ಅವರು ತಮಗೆ ಸೇರಿದಂತೆ ತಮ್ಮ ತಮ್ಮ ಭಾಗದ ಕೆಲಸವನ್ನು ಮಾಡಿಸಿದ ಕಾರಣ ಕೋಟೆಯ ಕಟ್ಟುವಿಕೆಯಲ್ಲಿ ಅಲ್ಲಲ್ಲಿ ಭೇದವು ಕಂಡುಬರುತ್ತದೆ. ಮೇಲೆ ಕಾಣಿಸಿದ ಅಗಸೆ ಬುರುಜುಗಳಲ್ಲಿ ೫ ಅಗಸೆಗಳೂ ಮೂರು ಬುರುಜು ಗಳೂ ಐತಿಹಾಸಿಕ ದೃಷ್ಟಿಯಿಂದ ಮಹತ್ವದವಿರುತ್ತವೆ.

**ಅಯ್ದು ಅಗಸೆಗಳು:**—೧. ಶಹರದ ಕೋಟೆಯ ಪೂರ್ವದಿಕ್ಕಿಗೆ ಅಲ್ಲಾಪೂರ ಅಗಸೆಯು. ಇಲ್ಲಿಂದ ಯುಸುಫ ಆದಿಲಶಹನು ಸ್ಥಾಪಿ ಸಿದ ಅಲ್ಲಾಪುರಕ್ಕೆ ಮಾರ್ಗವು ಹೋಗಿದೆ. ಮೊದಲಿನ ಇಬ್ಬರು ಮೂರು ಮಂದಿ ಬಾದಶಹರ ಕಾಲದಲ್ಲಿ ಆದ ದೊಡ್ಡ ಕಾಳಗದಲ್ಲಿ ಇದರ ಹೆಸರು ಮತ್ತೆ ಮತ್ತೆ ಹೇಳಲ್ಪಟ್ಟಿದೆ. ೨. ದಕ್ಷಿಣ ದಿಕ್ಕಿಗಿರುವ ಫತ್ತೆ ಅಗಸೆಯು—ಇಲ್ಲಿಂದ ಮನಗೋಳಿ ಎಂಬ ಊರಿಗೆ ಮಾರ್ಗವು ಹೋಗಿರುತ್ತದೆ. ಔರಂಗಜೇಬನು ಈ ಶಹರವನ್ನು ಗೆಲ್ಲುವ ಪೂರ್ವ ದಲ್ಲಿ ಇದಕ್ಕೆ ಮನಗೋಳಿ ಅಗಸೆಯೆಂದು ಹೆಸರಿತ್ತು. ಆದರೆ ಔರಂಗ ಜೇಬನು ಇದೇ ಅಗಸೆಯಿಂದ ಶಹರದಲ್ಲಿ ಪ್ರವೇಶಮಾಡಿದ್ದರಿಂದ ಇದಕ್ಕೆ ಫತ್ತೆ ಅಗಸೆಯೆಂದು ಹೆಸರಿಟ್ಟನು. ಅದೇ ಹೆಸರು ಈಗಲೂ ನಡೆದಿದೆ.

೩. ಪಶ್ಚಿಮಕ್ಕೆ ಮಕ್ಕಾ ಅಗಸೆಯು. ಇದರ ಮುಖವು ಮಕ್ಕೆಯ ಕಡೆಗೆ ಇತ್ತು. ಸಣ್ಣ ಅಲ್ಲಿ ಆದಿಲಶಹನಿಗೆ ಖಾನಮಹಮ್ಮದನೆಂಬ ಒಬ್ಬ ಪ್ರೀತಿಯ ವಜೀರನಿದ್ದನು. ಅವನು ತನ್ನ ಮೇಲೆ ಬಂದ ಆರೋಪವನ್ನು ಹೋಗಲಾಡಿಸುವದಕ್ಕಾಗಿ ಇದೇ ಅಗಸೆಯಿಂದ ಬರುತ್ತಿರುವಾಗ ಅಫಜುಲ್ ಖಾನ ಮೊದಲಾದವರ ಪಕ್ಷದ ಜನರು ಅವನನ್ನು ಕೊಂದರು. ಆ ಕಾಲದಿಂದ ಈ ಅಗಸೆಯನ್ನು ಮುಚ್ಚಿಬಿಟ್ಟಿರುತ್ತಾರೆ. ೪. ಶಹರಪುರ ಅಗಸೆಯು-ಆದಿಲಶಾಹಿಯ ಆಳಿಕೆಯಲ್ಲಿ ಈ ಅಗಸೆಯ ಹೊರಗಿನ ದೊಡ್ಡ ಬೈಲಲ್ಲಿ ಸಂತೆಯು ಕೂಡುತಿತ್ತು. ಇದಕ್ಕೆ ಶಹಾಪುರ ಅಗಸೆಯೆಂದು ಹೆಸರು. ೫. ಬ್ರಾಹ್ಮಣಿ ಅಗಸಿಯು—ಆದಿಲಶಾಹೀ ಆಡಳಿತೆಯಲ್ಲಿ ಹಿಂದೂಗಳಿಗೆ, ಅವರೊಳಗೆ ವಿಶೇಷವಾಗಿ ಬ್ರಾಹ್ಮಣರಿಗೆ ಮಾನವು ದೊರೆಯುತಿತ್ತೆಂದು ಈ ಅಗಸೆಯ ಹೆಸರಿನಿಂದ ಗೊತ್ತಾಗುತ್ತದೆ. ಈ ದೇಶದಲ್ಲಿ ಹಿಂದೂ ಕುಮಾರಿಕೆಯರೊಡನೆ ಲಗ್ನಮಾಡಿಕೊಂಡು ಅವರ ಆಪ್ತೇಷ್ಟರ ಸಹಾಯದಿಂದ ರಾಜ್ಯದಲ್ಲಿ ಶಾಂತತೆಯನ್ನು ಕಾಯ್ದುಕೊಳ್ಳುವ ಕ್ರಮವನ್ನು ಆದಿಲಶಾಹಿಯ ಸ್ಥಾಪಕನೇ ಮೊದಲು ಪ್ರಾರಂಭಿಸಿದನು. ಈ ಶ್ರೇಯಸ್ಸನ್ನು ಎಷ್ಟೋ ಜನರು ಅಕಬರನಿಗೆ ಕೊಡುತ್ತಾರೆ. ಆದರೆ ಅಕಬರನಿಗಿಂತ ನೂರಾರು ವರ್ಷ ಮುಂಚಿತವಾಗಿಯೇ ಯುಸುಫನ ಆಳಿಕೆಯು ಆಗಿಹೋಗಿರುತ್ತದೆ. ಮಾಂಸಭಕ್ಷಣಕ್ಕಾಗಿ ಬೇಕಾದ ಕಾಲದಲ್ಲಿ ಮ್ಲೇಂಛರಿಂದ ಆಗುವ ಪ್ರಾಣಿಗಳ ಕೊಲೆಯು ಹಿಂದೂಗಳಿಗೆ ವಿಶೇಷವಾಗಿ ಬ್ರಾಹ್ಮಣರಿಗೆ—ಸಹನವಾಗಲಿಲ್ಲ. ಆದ್ದರಿಂದ ಅವರ ಸಲುವಾಗಿ ಬೇರೆ ಸ್ಥಳವು ಕೊಡಲ್ಪಟ್ಟಿತು. ಈ ಜನರು ಯಾವ ಅಗಸೆಯಿಂದ ಹಾಯ್ದು ಶಹಪುರದಲ್ಲಿ ನೆರೆಯುವ ಸಂತೆಗೆ ಬರುತಿದ್ದರೋ ಆ ಅಗಸೆಗೆ ಬ್ರಾಹ್ಮಣಿ ಅಗಸೆ ಎಂದು ಹೆಸರು ಬಿದ್ದಿರುತ್ತದೆ. ಈಗ ಈ ಸ್ಥಳದಲ್ಲಿ ಜನವಸ್ತಿಯೇ ಇಲ್ಲದಿರಲು ಬ್ರಾಹ್ಮಣರು ಎಲ್ಲಿಂದ ಬರಬೇಕು?

**ಮೂರು ಬರುಜುಗಳು**—೧. ಫಿರಂಗಿ ಬುರುಜು—ಇದು ಫತ್ತೇ ಅಗಸೆಯ ಪೂರ್ವಕ್ಕಿದ್ದು ಫಿರಂಗಿಜನರು ಇದನ್ನು ಕಟ್ಟಿರುತ್ತಾರೆ. ಆದಿಲ

ಶಾಹಿ ಆಳಿಕೆಯಲ್ಲಿ ಎಷ್ಟೋ ಫಿರಂಗಿಜನರು ಆಳಾಗಿದ್ದರು. ಈ ಬುರುಜಿನ ಕಟ್ಟುವಿಕೆಯ ಕೆಲಸವು ಚೆನ್ನಾಗಿರುವದರಿಂದ ಇದು ಪ್ರಸಿದ್ಧವಾಗಿರುತ್ತದೆ. ೨. ನಾಬಾತ ಬುರುಜು—ಈ ಬುರುಜಿನ ಮೇಲೆ ವಿಜಾಪುರದಲ್ಲಿರುವ ತೋಫುಗಳಲ್ಲಿ ಎಲ್ಲಕ್ಕೂ ದೊಡ್ಡದಾದ ಲಾಂಡಾಕಸಾಬ ಎಂಬ ತೋಪು ಇರುತ್ತದೆ. ತಳವೂರಲಿಕ್ಕೆ ಪ್ರಶಸ್ತವಾದ ಸ್ಥಳದಿಂದ ಶತ್ರುಗಳು ಒಮ್ಮೆಲೆ ಹಲ್ಲೆಯನ್ನು ಮಾಡಬಾರದೆಂದು ಇಂತಹ ಬಲಕಟ್ಟಾದ ಬುರುಜಿನ ಮೇಲೆ ಇಂತಹದೊಂದು ದೊಡ್ಡ ತೋಫು ಇಡಲ್ಪಟ್ಟಿರುತ್ತದೆ. ಆದಿಲಶಾಹಿಯು ಹೋಗುವ ಕಾಲವೇ ಬಂದೊದಗಲು, ಮಾನವರು ಮಾಡಿದ ತೋಫುಗಳು ಏನು ಮಾಡಬಲ್ಲವು? ಔರಂಗಜೇಬನು ವಿಜಾಪುರವನ್ನು ತೆಗೆದುಕೊಳ್ಳಲಿಕ್ಕೆ ವಿಶ್ವಪ್ರಯತ್ನದಿಂದ ಮಾಡಿದ ತೋಫಿನ ಗುಂಡಿನ ಸುರಿಮಳೆಗೆ ಈ ಬುರುಜೂ, ತೋಫೂ ಸಾಕ್ಷಿಯನ್ನು ಕೊಡುತ್ತವೆ. ೩. ಸರ್ಜ ಬುರುಜು—ಈ ಶಬ್ದದ ಅರ್ಥವು ಸಿಂಹವು. ಈ ಬುರುಜಿನ ಮೇಲೆ ಮುಲೂಖ ಮೈದಾನೆಂಬ ಜಗಪ್ರಸಿದ್ಧವಾದ ತೋಫು ಇಡಲ್ಪಟ್ಟಿರುತ್ತದೆ. ಈ ಬುರುಜು ಮೊದಲು ಕೋಟೆಯನ್ನು ಬಿಟ್ಟು ಕಟ್ಟಲ್ಪಟ್ಟಿತ್ತು. ಹಿಂದಿನಿಂದ ಕೋಟೆಗೆ ಜೋಡಿಸಿರುವದರಿಂದ ಕೋಟೆಯ ಪರಿಘದಲ್ಲಿ ವ್ಯತ್ಯಾಸವು ಕಂಡುಬರುತ್ತದೆ.

## ಗೋಳಗುಮಟ ಅಥವಾ ಬೋಲಿಘುಮಜವು.

ಈ ಗುಮಟವನ್ನು ಆದಿಲಶಾಹಿ ವಂಶದ ೭ನೆಯ ಬಾದಶಹನಾದ ಸುಲ್ತಾನ ಮುಹಮ್ಮದನು ತನ್ನ ಗೋರಿಯ ಸಲುವಾಗಿಯೇ ೧೬೩೨ರಲ್ಲಿ ಕಟ್ಟಿಸಲಿಕ್ಕೆ ಪ್ರಾರಂಭಿಸಿದನು. ಅವನ ಕಾಲದಲ್ಲಿಯೇ ಅಂದರೆ ೧೬೬೪ ಇಸವಿ ವರೆಗೆ ಇದರ ಕೆಲಸವು ನಡೆದಿತ್ತು. ಶಿಖರದ ಕೆಲಸವು ಮಾತ್ರ ಉಳಿದಿತ್ತು. ಅದು ಇನ್ನೂ ಹಾಗೆಯೇ ಉಳಿದಿರುವದರಿಂದ ಇದಕ್ಕೆ ಬೋಳಗುಮಟವೆಂದೆನ್ನುತ್ತಾರೆ. ಇದರ ಅಪಭ್ರಂಶವಾಗಿಯಾಗಲಿ, ಬೇರೆ ಕಾರಣದಿಂದಾಗಲಿ ಇದಕ್ಕೆ "ಗೋಳಗುಮಟ" ಎಂದು ಹೆಸರು ಬಂದಿದೆ.

ಈ ಗುಮಟದಲ್ಲಿ ಹೊರಡುವ ಪ್ರತಿಧ್ವನಿಯ ಮೂಲಕ ಇದು "ಬೋಲಿ ಘುಮಜ" ಎಂಬ ಹೆಸರಿನಿಂದ ಪ್ರಸಿದ್ಧವಾಗಿರುತ್ತದೆ.

ಆದಿಲಶಾಹಿ ವಂಶದ ಬಾದಶಹರಲ್ಲಿ ಮಕ್ಕಳಿಗೆ ತಂದೆಗಳಿಗಿಂತ ಹೆಚ್ಚು ಹೆಸರುವಾಸಿಯಾಗಬೇಕೆಂಬ ಹವಣಿಕೆಯು ಬಹಳವಾಗಿತ್ತು. ಇದೇ ಕಾರಣದಿಂದ ಈ ಮಹಮ್ಮೂದ ಬಾದಶಹನ ತಂದೆಯು ಆಗಿನ ಕಾಲದಲ್ಲಿ ಶಕ್ಯವಿದ್ದ ಕಟ್ಟಡದ ಸಾಹಿತ್ಯಗಳನ್ನು ಕೂಡಿಸಿ ಶಿಲ್ಪಕಲಾ ಸಂಪೂರ್ಣತೆಯಿಂದ ಇಬ್ರಾಹಿಮ ರೋಜಾ ಎಂಬ ಇಮಾರತಿಯನ್ನು ಕಟ್ಟಿಸಿದನು. ಆದ್ದರಿಂದ ಈ ಮಹಮ್ಮೂದನಿಗೆ ತಂದೆಗಿಂತ ಮಿಗಿಲಾಗಬೇಕೆಂಬ ಆಲೋಚನೆ ಬಿತ್ತು. ಒಂದು ಶಾಸ್ತ್ರೀಯ ಮತ್ತು ಅತಿಶಯ ಭವ್ಯವಾದ ಇಮಾರತಿಯಿಂದಾದರೂ ತನ್ನ ತಂದೆಯನ್ನು ಮೀರುವದು ಶಕ್ಯವಿರುವದೊ ಹೇಗೆಂಬದನ್ನು ನೋಡಬೇಕೆಂದು ಇವನು ಈ ಬೋಳ ಗುಮಟವನ್ನು ಕಟ್ಟಿಸಿದನು. ಈ ಪ್ರಯತ್ನದಲ್ಲಿ ಇವನಿಗೆ ತುಂಬಾ ಯಶಸ್ಸು ಬಂತೆಂದು ಹೇಳಬಹುದು.

ವಿಜಾಪುರದಲ್ಲಿ, ಇಷ್ಟೇ ಅಲ್ಲ, ಇಡಿ ಜಗತ್ತಿನಲ್ಲಿ ಅತಿಶಯ ದೊಡ್ಡದಾದ ಒಂದು ಗುಮಟವು ಇದೇ ಇರುತ್ತದೆ. ಇದಲ್ಲದೆ ಇದರಲ್ಲಿ ಪ್ರತಿಧ್ವನಿಯು ಹೊರಡುತ್ತಿರುವುದರಿಂದ ನೋಡಲಿಕ್ಕೆ ಬಂದವರ ಮನರಂಜನೆಯಾಗುತ್ತದೆ.

ಈ ಗುಮಟವು ಚಚ್ಚೌಕಾಗಿದ್ದು ಪ್ರತಿಯೊಂದು ಬದಿಯು ೧೩೫ ಫೂ. ಇರುತ್ತವೆ. ಎತ್ತರವು ೨೦೦ ಫೂ. ಇದ್ದು ಗುಮಟದ ಒಳಗಿನ ವ್ಯಾಸವು ೧೨೫ ಫೂ. ಇರುತ್ತದೆ. ಸುತ್ತಲಿನ ಗೋಡೆಗಳು ೧೦ ಫೂ. ಗುಮಟದ ಗೋಡೆಗಳು ೯ ಫೂ. ದಪ್ಪಾಗಿರುತ್ತವೆ ಒಳಗೆ ನೆಲದಿಂದ ೧೧೦ ಫೂ. ಎತ್ತರದ ಮೇಲೆ ಗುಮಟದ ಕೆಳಗೆ ೧೦ ಫೂ. ಅಗಲಿನ ಮಾರ್ಗವಿರುತ್ತದೆ. ಗೋಳಗುಮಟದ ವೈಲಕ್ಷಣ್ಯವೆಲ್ಲ ಇಲ್ಲಿಯೇ ಇರುತ್ತದೆ. ಗುಮಟದ ಗೋಡೆಗಳ ಕಟ್ಟುವಿಕೆಯು ಮೂರು ಕಡೆಗೆ ಒಂದೇ

ಪ್ರಕಾರದ್ದು ಇದ್ದು, ಳನೆಯ ಅಂದರೆ ಉತ್ತರ ಕಡೆಯ ಗೋಡೆಯು ಮಾತ್ರ ಬೇರೆ ಪ್ರಕಾರದಿಂದ ಕಟ್ಟಲ್ಪಟ್ಟಿದೆ. ಈ ಬದಿಗೆ ಮಹಮ್ಮೂದನ ತಾಯಿಯ ಗೋರಿಯಾಗತಕ್ಕದ್ದಿತ್ತು. ಆದರೆ ಆಕೆಯು ಮಕ್ಕೆಯಲ್ಲಿ ತೀರಿಕೊಂಡದ್ದರಿಂದ ಈ ಸ್ಥಳವು ಹಾಗೆಯೇ ಉಳಿದಿದೆ.

ಇಮಾರತಿಯಲ್ಲಿ ಸೇರಿದ ಕೂಡಲೇ ಎದುರಿನ ಕಟ್ಟೆಯ ಮೇಲೆ ಗೋರಿಗಳು ಕಾಣಬರುತ್ತವೆ. ಇವು ನಿಜವಾದ ಗೋರಿಗಳಲ್ಲ; ಇವು ತೋರಿಕೆಯ ಗೋರಿಗಳು. ನಿಜವಾದ ಗೋರಿಗಳು ಈ ತೋರಿಕೆಯ ಗೋರಿಗಳ ಕೆಳಗೆ ೨೦ ಫೂ. ಅಂತರದಲ್ಲಿ ಕೆಳಗೆ ನೆಲಮನೆಯಲ್ಲಿ ಇರುತ್ತವೆ. ತೋರಿಕೆಯ ಗೋರಿಗಳು ನಿಜವಾದ ಗೋರಿಗಳಿರುವ ಸ್ಥಳದಿಂದ ನೀಟಾಗಿಯೇ ಮೇಲೆ ಕಟ್ಟಲ್ಪಟ್ಟಿವೆ. ಮಕರದ ಕೆಳಗೆ ಇರುವ ಗೋರಿಯು ಮಹಮ್ಮೂದ ಶಹನದು. ಅದಕ್ಕೆ ಹತ್ತಿಯೇ ಪೂರ್ವದ ಕಡೆಗೆ ಅವನ ಚಿಕ್ಕ ಹೆಂಡತಿಯ ಗೋರಿಯು; ಅದರ ಆಚೆಗೆ ಮೊಮ್ಮಗನ ಗೋರಿಯು. ಪಶ್ಚಿಮಕ್ಕೆ ರಂಭಾವತಿ ಅದರಾಚೆಗೆ, ಹಿರಿಯ ಹೆಂಡತಿ ಇವರುಗಳ ಗೋರಿಗಳು ಕ್ರಮವಾಗಿ ಇರುತ್ತವೆ.

ನೆಲದಿಂದ ನೂರಹತ್ತು ಫೂಟು ಎತ್ತರದ ಮೇಲೆ ಗುಮಟದ ಒಳ ಭಾಗಕ್ಕೆ ಸುತ್ತುವರಿಯುವ ೧೦ ಫೂಟು ಅಗಲಾದ ಒಂದು ಮಾರ್ಗವಿರುತ್ತದೆಂದು ಮೇಲೆ ಹೇಳಿರುತ್ತೇವಷ್ಟೇ! ಇದಕ್ಕೆ ಪ್ರತಿಧ್ವನಿಶಾಲೆ (ವ್ಹಿಸ್ಪರಿಂಗ ಗ್ಯಾಲರಿ) ಎನ್ನುತ್ತಾರೆ. ಈ ಶಾಲೆಗೆ ಹೋಗಲಿಕ್ಕೆ ನಾಲ್ಕು ದಿಕ್ಕಿಗೆ ನಾಲ್ಕು ಗೋಪುರಗಳಿರುತ್ತವೆ. ಈ ಗೋಪುರಗಳಲ್ಲಿನ ಕಲ್ಲಿನ ಕಂಬಕ್ಕೆ ನಾಗಮುರಿಗೆಯಂತೆ ಸುತ್ತುವರಿಯುತ್ತ ಮೇಲಕ್ಕೇರುವ ಪಾವಟಿಗೆಗಳಿವೆ. ಇವುಗಳಲ್ಲಿ ನೈರುತ್ಯ ದಿಕ್ಕಿನ ಪಾವಟಿಗೆಗಳು ಈಗಲೂ ವ್ಯವಸ್ಥಿತವಾಗಿವೆ. ಈ ಮಾರ್ಗವು ತೆರೆದಿರುತ್ತದೆ.

ಪಾವಟಿಗೆಗಳನ್ನು ಏರುತ್ತ ಹೋಗುವಾಗ ದಣಿದರೆ ವಿಶ್ರಾಂತಿಗೆಂದು ಗೋಪುರಗಳಲ್ಲಿಯೇ ಏಳು ದಿವಾಣಖಾನೆಗಳಿರುತ್ತವೆ. ಇವೇ ಆ

ಗೋಪುರದ ಅಂತಸ್ತುಗಳಾಗಿವೆ. ಪಾವಟಿಗೆಗಳಿರುವ ೬ನೆಯ ಅಂತಸ್ತಿಗೆ ಬರಲು, ಗುಮಟಕ್ಕೆ ಹೋಗುವದಕ್ಕೆ ಬೇರೊಂದು ದಾರಿಯಿರುತ್ತದೆ. ಈ ಮಾರ್ಗದಿಂದ ಹೊರಬಿದ್ದ ಕೂಡಲೆ ಗುಮಟವು ಕಾಣಿಸುತ್ತದೆ. ಗುಮಟದ ಭಾರವು ಗೋಡೆಗಳ ಮೇಲೆ ವಿಶೇಷವಾಗಿ ಬಿದ್ದಿರುವದಿಲ್ಲ. ಚೌಕೋನಾಕೃತಿಯಾಗಿ ಗೋಡೆಗಳ ಕಟ್ಟುವಿಕೆಯು ಮುಗಿದನಂತರ ಪ್ರತಿಯೊಂದರಲ್ಲಿ ಮೂರು ಭಾಗಗಳನ್ನು ಮಾಡಿ, ಈ ಭಾಗಾಂಗಗಳ ಕಟ್ಟುಗಳ ನಡುವೆ ಸರಿಯಾದ ಮೂಲೆಗಳನ್ನು ಕೂಡಿಸಿ, ಅಷ್ಟಕೋನಾಕೃತಿಯನ್ನು ಹುಟ್ಟಿಸಿರುತ್ತಾರೆ. ಆ ಮೇಲೆ ಅದಕ್ಕೆ ವರ್ತುಳಾಕೃತಿಯನ್ನು ಕೊಟ್ಟು ಗುಮಟವನ್ನು ಕಟ್ಟಿರುತ್ತಾರೆ. ಗುಮಟದಲ್ಲಿ ಪ್ರವೇಶಮಾಡಿದ ಕೂಡಲೆ ಇಮಾರತಿಯ ವಿಶಾಲತ್ವದ ಕಲ್ಪನೆಯು ಬರುತ್ತದೆ. ಇದೇ ಪ್ರತಿಧ್ವನಿ ಶಾಲೆಯು. ಇದಕ್ಕೆ ಎಂಟು ದಿಕ್ಕುಗಳಿಂದ ಬೆಳಕು ಬರುವಂತೆ ಕಿಡಿಕಿಗಳನ್ನು ಬಿಟ್ಟಿರುತ್ತಾರೆ. ಈ ಕಿಡಿಕಿಗಳ ನಡುವಿನ ಸ್ಥಳಗಳಲ್ಲಿ ಕೂಡುವದಕ್ಕೆಂದು ಗಚ್ಚಿನ ಕಟ್ಟೆಗಳನ್ನು ಕಟ್ಟಿರುತ್ತಾರೆ. ಈ ಕಟ್ಟೆಯ ಮೇಲೆ ಒಬ್ಬನು ಕುಳಿತು ಅದರ ಎದುರಿಗಿರುವ ಮತ್ತೊಂದು ಕಟ್ಟೆಯ ಮೇಲಿನ ಮನುಷ್ಯನಿಗೆ ಅತಿಶಯ ಮೆಲ್ಲಗಾಗಿ ಮಾತಾಡಿ ಹೇಳಿದರೂ ಕೇಳಬರುತ್ತದೆ. ಕಿಸೆಯೊಳಗಿನ ಸಣ್ಣ ಗಡಿಯಾಲದ "ಕಟ್‌ಕಟ್" ಎಂಬ ಸಪ್ಪಳವು ಕೂಡ ಗದ್ದಲವಿಲ್ಲದಿದ್ದರೆ ಕೇಳಬರುತ್ತದೆ. ದೊಡ್ಡ ಸಪ್ಪಳಕ್ಕಂತೂ ಏಳು ಸಾರೆ ಸ್ಪಷ್ಟವಾಗಿಯೂ ಮುಂದೆ ೪।೫ ಸಾರೆ ಅಸ್ಪಷ್ಟವಾಗಿಯೂ, ಪ್ರತಿಧ್ವನಿಯು ಹುಟ್ಟುತ್ತದೆ.

ಯಾವ ದಿಕ್ಕಿನಿಂದ ಗುಮಟವನ್ನು ಪ್ರವೇಶಿಸುತ್ತೇವೋ ಅದರ ವಿರುದ್ಧ ದಿಕ್ಕಿನಿಂದ ಹೊರಬಿದ್ದರೆ, ಗುಮಟದ ಮೇಲೆ ಜೋತುಬಿದ್ದ ಕಬ್ಬಿಣದ ಎರಡು ಸರಪಳಿಗಳು ಕಾಣಬರುತ್ತವೆ. ಇವುಗಳ ಸಹಾಯದಿಂದ ಗುಮಟದ ಶಿಖರದ ವರೆಗೆ ಏರಿಹೋಗಿ ದುರಸ್ತಿಯನ್ನು ಮಾಡಲಿಕ್ಕೆ ಅನುವಾಗುತ್ತದೆ. ಒಮ್ಮೆ ಗುಮಟಕ್ಕೆ ಹೊರಗಿನಿಂದ ಪ್ರದಕ್ಷಿಣೆಯನ್ನು ಹಾಕಿ ಸುತ್ತಲಿನ ಪ್ರದೇಶದ ಸೌಂದರ್ಯವನ್ನು ನೋಡಿ ಕೆಳಗೆ ಬರಬಹುದು.



ಜುಮ್ಮಾ ಮಸೀದೆ.

ಆದಿಲಶಾಹಿ ಆಳಿಕೆಯಲ್ಲಿ ಪರದೇಶದಿಂದ ಬಂದ ಅನೇಕ ವಸ್ತುಗಳಲ್ಲಿ ಈ ಇಮಾರತಿಯ ದಕ್ಷಿಣ ದಿಕ್ಕಿನ ಬಾಗಿಲ ಮೇಲೆ ಜೋತು ಬಿಟ್ಟ ಚಿಕ್ಕ ಕಲ್ಲಿನ ತುಂಡು (ಮಿಟಿಯೊರಾಯಿಟ್) ಎಂಬ ಒಂದಾಗಿದೆ. ಇದು ದಕ್ಷಿಣ ಆಫ್ರಿಕೆಯಿಂದ ತರಲ್ಪಟ್ಟದ್ದು. ಆ ಕಾಲದಲ್ಲಿ ಯಾವನೋ ಒಬ್ಬನು ಬಾದಶಹನಿಗೆ ಕಾಣಿಕೆಯಾಗಿ ಅರ್ಪಿಸಿದ್ದನಂತೆ. ಇದು ವಿದ್ಯುತ್ತಿನ (ಸಿಡಲಿನ) ಕಲ್ಲು ಇದ್ದು ಇಮಾರತಿಯನ್ನು ಕಟ್ಟುವ ಕಾಲದಲ್ಲಿ ಕೆಸರಿನಲ್ಲಿ ಸಿಕ್ಕಿತೆಂದು ಹಾರಸುದ್ದಿಯೊಂದನ್ನು ಹೇಳುತ್ತಾರೆ.

ಇಮಾರತಿಯ ನಗಾರಖಾನೆಯು ಬಹಳ ಮುರುಕಳಿಗೆ ಬಂದಿತ್ತು. ಅದನ್ನು ದುರಸ್ತಮಾಡಿಸಿ ಪುರಾಣವಸ್ತು-ಸಂಗ್ರಹಾಲಯವನ್ನು ಮಾಡಿರುತ್ತಾರೆ. ಇಲ್ಲಿ ಹಳೆಯ ಕತ್ತಿಗಳೂ, ತುಬಾಕಿಗಳೂ, ಜಾಜುಮುಗಳೂ, ಚೀನಿ ಮಣ್ಣಿನ ಪಾತ್ರೆಗಳೂ ವಿಜಯನಗರದ ರಾಮರಾಯನ ಕಲ್ಲಿನ ತಲೆಯೂ ನೋಡಲಿಕ್ಕೆ ದೊರೆಯುತ್ತವೆ. ಇದರ ಕೆಳಗಿನ ಅಂತಸ್ತಿನಲ್ಲಿ ಕೆಲವು ಶಿಲಾಲೇಖಗಳೂ, ಮಸೀದೆಯ ಕಲ್ಲುಗಳೂ, ತೋಫುಗಳೂ ಇಡಲ್ಪಟ್ಟಿರುತ್ತವೆ.

## ೨. ಜುಮ್ಮಾಮಸೀದೆಯು.

ದಕ್ಷಿಣ ಹಿಂದುಸ್ಥಾನದಲ್ಲಿ ಎಲ್ಲಕ್ಕೂ ದೊಡ್ಡದಾದ ಈ ಮಸೀದೆಯು ಇದೇ ಹೆಸರಿನ ಪೇಟೆಯಲ್ಲಿರುತ್ತದೆ. ಗೋಳಗುಮಟದ ದಕ್ಷಿಣಕ್ಕೆ ಹೋಗಿರುವ ಮಾರ್ಗದಿಂದ ಇಲ್ಲಿಗೆ ಬರಲಿಕ್ಕಾಗುವದು. ನಡುವೆ ಹಾಜೀ ಹಸನ ಎಂಬವನೊಬ್ಬನ ಗೋರಿಯು ಹತ್ತುವದು. ಅಲ್ಲಿ ಬಣ್ಣದ ಕೆಲಸವನ್ನು ನೋಡಬಹುದು.

ಈ ಮಸೀದೆಯನ್ನು ಕಟ್ಟಿಸಲಿಕ್ಕೆ ೧ನೆಯ ಅಲ್ಲಿ ಆದಿಲಶಹನು ೧೫೭೫ರಲ್ಲಿ ಪ್ರಾರಂಭಿಸಿದನು. ಮುಂದೆ ಬಹಳ ಕಾಲದ ವರೆಗೆ ಈ ಕೆಲಸವು ನಡೆದೇ ಇತ್ತು. ತರುವಾಯ ಔರಂಗಜೇಬನೂ ಸಾತಾರೆಯ ಅರಸನೂ ಇದಕ್ಕೆ ಸಹಾಯ ಮಾಡಿದರೂ ಇದರ ಕೆಲಸವು ಮುಗಿಯಲಿಲ್ಲ. ಈ

ಇಮಾರತಿಯ ಮೇಲೆ ಎರಡು ಸಾರೆ ಸಿಡಲಿನ ಹೊಡತಗಳು ಬಿದ್ದರೂ ಸುದೈವದಿಂದ ಮುಖ್ಯ ಇಮಾರತಿಗೆ ಅಪಾಯವಾಗಲಿಲ್ಲ.

ಮೊದಲಿನ ಸಾರೆ ಈ ಗುಮಟಕ್ಕೆ ಅರ್ಧ ಇಂಚು ವ್ಯಾಸವುಳ್ಳ ಒಂದು ಛಿದ್ರ ಮಾತ್ರ ಬಿದ್ದಿತು. ಎರಡನೆಯ ಸಾರೆ ಮಾತ್ರ ಆಗ್ನೇಯ ದಿಕ್ಕಿಗಿರುವ ಪವಳಿಯು ಸಂಪೂರ್ಣವಾಗಿ ಬಿದ್ದುಹೋಯಿತು.

ಈ ಇಮಾರತಿಗೆ ನಾಲ್ಕು ಬಾಗಿಲುಗಳಿರುತ್ತವೆ. ಇವುಗಳಲ್ಲಿ ದಕ್ಷಿಣದ ಬಾಗಿಲನ್ನು ಔರಂಗಜೇಬನ ಕಾಲದಲ್ಲಿಯೇ ಬಂದು ಮಾಡಿದರು. ಮುಖ್ಯ ಬಾಗಿಲು ಪೂರ್ವಾಭಿಮುಖವಾಗಿದ್ದು, ಪ್ರವಾಸಿಗಳಿಗೆ ಉತ್ತರದ ಬಾಗಿಲೇ ಅನುಕೂಲವಾಗುವದರಿಂದ ಅದನ್ನೇ ಉಪಯೋಗಿಸುತ್ತಾರೆ. ಅದರಲ್ಲಿಯೂ ದೊಡ್ಡ ಬಾಗಿಲು ಒಮ್ಮೊಮ್ಮೆ ಬಂದಾಗಿರುತ್ತದೆ. ಆಗ ಸಣ್ಣದೊಂದು ಬಾಗಿಲಿಂದ ಒಳಗೆ ಸೇರಬೇಕಾಗುತ್ತದೆ. ಮೊದಲು ಪೂರ್ವ-ಪಶ್ಚಿಮವಾದ ಪವಳಿಯು ಇದ್ದು ಆ ಮೇಲೆ ಪ್ರಶಸ್ತವಾದ ಅಂಗಣ ವಿರುತ್ತದೆ ಬಳಿಕ ಮತ್ತೊಂದು ಪವಳಿಯು ಹತ್ತುತ್ತದೆ. ಪಟಾಂಗಣ ದಲ್ಲಿ ಒಂದು ಕಾರಂಜಿಯು ಇರುತ್ತದೆ. ಇದಕ್ಕೆ ಬೇಗಮ್ಮನ ಕೆರೆಯಿಂದ ನೀರು ತಂದಿರುತ್ತಾರೆ.

ಮುಖ್ಯ ಮಸೀದೆಯ ಕೆಳಗೆ ಮಾಳಿಗೆಯಿಂದ ವ್ಯಾಪಿಸಿದ ಸ್ಥಳವು ೨೫೭ ಅಡಿ ಉದ್ದವಾಗಿಯೂ ೧೦೬ ಅಡಿ ಅಗಲಾಗಿಯೂ ಇದೆ. ಈ ಸ್ಥಳದಲ್ಲಿ ಒಬ್ಬ ಮನುಷ್ಯನು ಬಗ್ಗಿ ನಿಮಾಜು ಮಾಡಲಿಕ್ಕೆ ಬರುವಂತೆ ಮನೆಗಳನ್ನು ಮಾಡಿರುತ್ತಾರೆ. ಮುಖ್ಯ ಮಸೀದೆಯ ಕಮಾನದಲ್ಲಿ (ಮೇಹರಾಬ) ಬಂಗಾರದ ಅಕ್ಷರಗಳಿಂದ ಖುರಾನದೊಳಗಿನ ಕೆಲವು ವಾಕ್ಯಗಳನ್ನು ಬರೆದಿರುತ್ತಾರೆ. ಅವುಗಳಲ್ಲಿಯ ಮುಖ್ಯ ವಾಕ್ಯಗಳ ಸಾರಾಂಶವು ಕೆಳಗೆ ಬರೆದಂತೆ:—

೧. ವಯಸ್ಸು ಒಂದು ಕಟ್ಟಡದಂತೆ ಇರುತ್ತದೆ. ಅದರ ಮೇಲೆ ವಿಶ್ವಾಸವನ್ನಿಡಬೇಡ!



ಜುಮ್ಮಾ ಮಸೀದೆಯೊಳಗಿನ ಮುಖ್ಯಕಮಾನು.

೨. ಜಗತ್ತೂ ಅದರ ಮೇಲಿನ ಪ್ರಾಣಿಗಳೂ ಸ್ಥಿರವಲ್ಲ.

೩. ಜಗತ್ತಿನಲ್ಲಿ ಪ್ರವಾಸ ಮಾಡುವದು ಚೆಲೊ. ಏಕೆಂದರೆ ಅದರಲ್ಲಿ ಅನೇಕ ಉತ್ತಮೋತ್ತಮ ವಸ್ತುಗಳಿರುತ್ತವೆ.

೪. ಆಯುಷ್ಯವು ಸುಶೋಭಿತ ಸಂಪತ್ತಿನಂತೆ ಇರುತ್ತದೆ. ಆದರೆ ಅದು ಚಿರಸ್ಥಾಯಿಯಲ್ಲ.

ಈ ಇಮಾರತಿಯ ಎಲ್ಲ ಭಾಗಗಳಲ್ಲಿ ಕೂಡಿ ೪೦೦೦ ಜನರು ನಿಮಾಜ ಮಾಡಬಹುದು. ಇದರ ಗುಮಟವು ಶಿಲ್ಪ ಶಾಸ್ತ್ರಕ್ಕನುಸರಿಸಿ ಬಹಳ ಉತ್ತಮ ರೀತಿಯಿಂದ ಸಾಧಿಸಿರುತ್ತದೆ. ಆದರೆ ಅದು ಈಗಿದ್ದಕ್ಕಿಂತ ೭-೮ ಫೂಟು ಎತ್ತರವಾಗಿದ್ದರೆ, ಪೃಥ್ವಿಯಲ್ಲಿ ಇದೊಂದು ಸುಂದರವಾದ ಕಟ್ಟಡವಾಗುತಿತ್ತೆಂದು ತಜ್ಞರ ಮತವಿರುತ್ತದೆ.

ಇಮಾರತಿಯು ಎಷ್ಟು ಸ್ಥಲವನ್ನು ವ್ಯಾಪಿಸಿರುತ್ತದೆಂಬದರ ಕಲ್ಪನೆಯು ಮೇಲೆ ಹೋಗಿ ನೋಡಿದ ಹೊರತು ಬರುವದಿಲ್ಲ. ಮೇಲೆ ಹೋಗಲಿಕ್ಕೆ ದಕ್ಷಿಣದ ಗೋಡೆಯಲ್ಲಿ ಒಂದು ಮಾರ್ಗವಿದೆ. ಮುಖ್ಯ ಬಾಗಿಲಿನ ಕಟ್ಟುವಿಕೆಯ ಕೆಲಸವಾದರೂ ನೋಡತಕ್ಕದ್ದಾಗಿದೆ.

## ೩. ಮೇಹತ್ತರ ಮಹಾಲ.

ಜುಮ್ಮಾಮಸೀದೆಯಿಂದ ಪಶ್ಚಿಮ ದಿಕ್ಕಿಗೆ ಹೋಗುವ ದಾರಿಯಲ್ಲಿ ಈ ಇಮಾರತಿಯು ಇರುತ್ತದೆ. ಹೋಗುವಾಗ ಮಾರ್ಗದಲ್ಲಿ ಎಡಗಡೆಗೆ ಯುಸುಫನ ಜಾಮೀಮಸೀದೆಯೂ ಬಲಗಡೆ ಬಾರೀಕಮಾನವೂ, ಖವಾಸಖಾನ ಮುಸ್ತಾಫಖಾನರ ದೊಡ್ಡ ಮನೆಗಳೂ ಕನಾತಿ ಮಸೀದೆಯೂ ಹತ್ತುತ್ತವೆ.

ಈ ಇಮಾರತಿಯು ಯಾವ ರಾಜನದೂ ಅಲ್ಲ, ಯಾವ ದೊಡ್ಡ ಸರದಾರನದೂ ಅಲ್ಲ. ಹೀಗಿದ್ದು ಅದಕ್ಕೆ ಮಹಾಲವೆಂಬ ಹೆಸರು ಏಕೆ ಬಂದಿತು? ಮತ್ತು ಇದನ್ನು ಯಾರು ಕಟ್ಟಿಸಿದರು? ಇತ್ಯಾದಿ ಪ್ರಶ್ನೆಗಳಿಗೆ

ಉತ್ತರವು ದೊರೆಯುವಂತಿಲ್ಲ. ಮುಹಮ್ಮೂದಶಹನ ಆಳಿಕೆಯಲ್ಲಿ ಇದನ್ನು ಕಟ್ಟಿರಬಹುದೆಂದು ಕೆಲವರು ಹೇಳುತ್ತಾರೆ. ಅಂಡೇಮಸೀದೆಯೆಂಬ ಹೆಸರಿನಿಂದ ಒಂದು ಸುಂದರವಾದ ಮಸೀದೆಯು ಈ ಪೂರ್ವದಲ್ಲಿಯೇ ಕಟ್ಟಲ್ಪಟ್ಟಿತ್ತು. ಅದಕ್ಕಿಂತ ಈ ಇಮಾರತಿಯು ಹೆಚ್ಚು ಸುಂದರವಾದ್ದರಿಂದ ಇದಕ್ಕೆ ಮಹಾಲೆಂಬ ಹೆಸರು ಬಿದ್ದಿರಬಹುದೆಂದು ತೋರುತ್ತದೆ. ಸಂಸ್ಕೃತದಲ್ಲಿ ವಿಶೇಷಣಗಳಿಗೆ ತರ, ತಮ ಪ್ರತ್ಯಯುಗಳು ಬರುವಂತೆ ಪಾರ್ಸಿ ಭಾಷೆಯಲ್ಲಿಯೂ ತರ ತರಿನ್ ಪ್ರತ್ಯಯುಗಳು ಬರುತ್ತವೆ. ಮೇಹ ಶಬ್ದದ ಅರ್ಥವು ಮಹತ್ ಎಂದಿದೆ. ಆದ್ದರಿಂದ ಹೆಚ್ಚು ಸುಂದರವಾದ್ದರಿಂದ ಇದಕ್ಕೆ ಮೇಹತ್ತರ ಮಹಾಲೆಂಬ ಹೆಸರು ಬಂದಿರಬಹುದು. ಮೇಹತ್ತರ ಶಬ್ದದ ಎರಡನೆಯ ಅರ್ಥವು ಭಂಗಿ ಎಂದು ಆಗುತ್ತದೆ. ಈ ಇಮಾರತಿಯನ್ನು ಒಬ್ಬ ಭಂಗಿಯು ಕಟ್ಟಿಸಿದನೆಂತಲೂ ಕೆಲವರು ಹೇಳುತ್ತಾರೆ. ಇದರ ಸಂಬಂಧದಿಂದ ಒಂದು ದಂತ ಕಥೆಯುಂಟು. ಒಮ್ಮೆ ಮಹಮ್ಮದಶಹನಿಗೆ ಹೊಟ್ಟೆಶೂಲೆಯು ಎದ್ದಿತ್ತು. ಕೆಲವರು ಅವನ ಮೇಲೆ ಬೇರೆ ಸಂಕಟವು ಬಂದಿತ್ತೆಂತಲೂ ಹೇಳುತ್ತಾರೆ. ಅದು ದೂರಾಗುವದಕ್ಕಾಗಿ ಅವನು ತನ್ನ ಜೋಯಿಸನನ್ನು ಕೇಳಿದನು. ಮುಂಜಾನೆ ಯಾರ ಮೋರೆಯನ್ನು ಮೊದಲು ನೋಡುವಿಯೋ ಅವನಿಗೆ ವಿಪುಲವಾಗಿ ದ್ರವ್ಯವನ್ನು ಕೊಟ್ಟುಬಿಟ್ಟರೆ, ನಿನ್ನ ಹೊಟ್ಟೆಕಡತ ಇಳಿಯುವದೆಂದು ಜ್ಯೋತಿಷಿಯು ಹೇಳಿದನು. ಆದರೆ ಮಹಮ್ಮೂದನಿಗೆ ಭಂಗಿಯ ದರ್ಶನವು ಮೊದಲು ಆಯಿತು. ಜ್ಯೋತಿಷಿಯು ತಾನು ದ್ರವ್ಯವನ್ನೆಬ್ಬಿಸಬೇಕೆಂದು ಹಾಕಿದ ಹಂಚಿಕೆಯು ತಪ್ಪಿತು. ಇಷ್ಟೊಂದು ಸಂಪತ್ತಿಯು ದೊರಕಿದ್ದರಿಂದಾಗಲಿ, ಅನ್ಯ ಕಾರಣದಿಂದಾಗಲಿ, ಆ ಭಂಗಿಗೆ ವೈರಾಗ್ಯವು ಹುಟ್ಟಿದ್ದರಿಂದ ಮೊದಲಿನಿಂದ ಮಾಡುತಿದ್ದ ಉದ್ಯೋಗವನ್ನು ಬಿಟ್ಟುಕೊಟ್ಟು ಫಕೀರನಾಗಿ, ಈ ಇಮಾರತಿಯನ್ನು ಕಟ್ಟಿಸಿದನೆಂದು ಹೇಳುತ್ತಾರೆ.

ಈ ಇಮಾರತಿಯು ಸ್ವತಂತ್ರವಾಗಿರದೆ ಬೀಳುವ ಸ್ಥಿತಿಯಲ್ಲಿರುವ ಒಂದು ನಗಾರಖಾನೆಯಾಗಿ ಇರುತ್ತದೆ. ನೋಡತಕ್ಕ ಕೈಕೆಲಸವನ್ನು ಇದರ ಮುಂಭಾಗದಲ್ಲಿ ನೋಡಬಹುದು.



ಮೆಹತ್ತರ ಮಹಾಲ.

## ೪. ಅಸಾರ ಮಹಾಲ.

ಜುಮ್ಮಾಮಸೀದೆಯಿಂದ ಮೇಹತ್ತರ ಮಹಾಲಿಗೆ ಹೋಗುವ ದಾರಿಯಿಂದ ಮುಂದಕ್ಕೆ ಸಾಗಿದರೆ, ಅರಕಿಲ್ಲೆಯನ್ನು ಹತ್ತುವ ಮೊದಲು ಉತ್ತರ ದಿಕ್ಕಿಗೆ ಹೋಗುವ ಮತ್ತೊಂದು ಹಾದಿಯು ಕಾಣಿಸುವದು. ಈ ಮೇಹತ್ತರ ಮಹಾಲು ಹತ್ತುವ ಮೊದಲು ಸಣ್ಣದೊಂದು ದಾರಿಯು ಉತ್ತರ ದಿಕ್ಕಿಗೆ ಹೋಗುತ್ತದೆ. ಈ ದಾರಿಯಿಂದಲೂ ಅರಕಿಲ್ಲೆಗೆ ಹೋಗಬಹುದು.

ಈ ಇಮಾರತಿಯನ್ನು ಮಹಮ್ಮದಶಹನು ೧೬೩೨ರಲ್ಲಿ ಕಟ್ಟಿಸಿದನು. ಕೋಟೆಯ ಹೊರಗೆ ಒಂದು ಇಮಾರತಿಯನ್ನು ಕಟ್ಟಿಸಿ, ಜನರ ಯೋಗಕ್ಷೇಮದ ವಿಚಾರಮಾಡಬೇಕೆಂಬದೊಂದು ಉದ್ದೇಶವಿತ್ತು. ಆದರೆ ಈ ವಿಚಾರವು ಶಹಾಜಹಾನ ಬಾದಶಹನಿಗೆ ಸರಿದೋರದ್ದರಿಂದ ಕೋಟೆಯಲ್ಲಿ ಬೇರೊಂದು ಇಮಾರತಿಯನ್ನು ಕಟ್ಟಿಸಬೇಕಾಯಿತು. ಕೋಟೆಯ ಹೊರಗೆ ಯೋಗಕ್ಷೇಮದ ವಿಚಾರವು ಕೇವಲ ಸಾರ್ವಭೌಮ ಅರಸನಿಗೆ ಮಾತ್ರ ಇರುತ್ತದೆಂದು ಶಹಾಜಹಾನ ಬಾದಶಹನ ಮತವಿತ್ತು.

ಮಹಮ್ಮದಶಹನ ತಂದೆಯ ಆಳಿಕೆಯಲ್ಲಿ ಅರಬಸ್ಥಾನದ ಒಬ್ಬ ಗೃಹಸ್ಥನು ಮಹಮ್ಮದ ಪೈಗಂಬರನ ಗಡ್ಡದ ಕೂದಲನ್ನೂ ಕೆಲವು ವಸ್ತ್ರಗಳನ್ನೂ ತಂದು ಬಾದಶಹನಿಗೆ, ಕಾಣಿಕೆಯಾಗಿ ಕೊಟ್ಟನು. ಆ ಕೂದಲವನ್ನಿಡುವದಗೋಸ್ಕರ ಬಾದಶಹನು ಬೇರೊಂದು ಇಮಾರತಿಯನ್ನು ಕಟ್ಟಿಸಿದನು. ಆದರೆ ಆ ಇಮಾರತಿಗೆ ಬೆಂಕಿ ಹತ್ತಿದ್ದರಿಂದ ಆ ಕೂದಲು ವಸ್ತ್ರಗಳನ್ನು ಸುರಕ್ಷಿತವಾಗಿ ಇಡಲಿಕ್ಕೆ ಬೇರೊಂದು ಇಮಾರತಿಯು ಬೇಕಾಗಿತ್ತು. ಈ ಅಸಾರಮಹಾಲು ಆಗ ಬರಿದಾಗಿತ್ತಾದ್ದರಿಂದ ಇದರಲ್ಲಿಯೇ ಅವುಗಳನ್ನು ಇಟ್ಟುಬಿಟ್ಟನು. ಅಂದಿನಿಂದ ಇದು ಅಸಾರ (ಪವಿತ್ರ) ಮಹಾಲ ಎಂದು ಹೆಸರಾಯಿತು. ಪೈಗಂಬರನ ಆರಿವೆ ಕೂದಲುಗಳು ಮಾತ್ರ ಯಾರಿಗೂ ನೋಡಲಿಕ್ಕೆ ಸಿಗುವಂತಿಲ್ಲ; ಮತ್ತು ಅವುಗಳನ್ನು ಯಾರೂ ನೋಡಿಯೂ ಇಲ್ಲ. ಕೇವಲ ಕಾಗದಪತ್ರಗಳಿಂದಲೇ ತಿಳಿಯು

ಬೇಕಾಗಿದೆ. ಮುಹಮ್ಮದನ ಗಡ್ಡದ ಕೂದಲನ್ನು ಕಾಜಿನ ಒಂದು ನಳಿಯಲ್ಲಿಟ್ಟು ಈ ನಳಿಯನ್ನು ಒಂದು ಸಣ್ಣ ಪೆಟ್ಟಿಗೆಯಲ್ಲಿ ಹಾಕಿ ಈ ಪೆಟ್ಟಿಗೆಯನ್ನು ಬೆಳ್ಳಿಯ ತಗಡಿನ ಪಟ್ಟಿಗಳಿಂದ ಭದ್ರಪಡಿಸಿದ ಮತ್ತೊಂದು ದೊಡ್ಡ ಪೆಟ್ಟಿಗೆಯಲ್ಲಿ ಇಟ್ಟಿರುತ್ತಾರಂತೆ. ಮಧ್ಯದಲ್ಲಿ ಯಾವನೋ ಒಬ್ಬನು ದ್ರವ್ಯದ ಆಶೆಯಿಂದ ಈ ಬೆಳ್ಳಿಯ ಪಟ್ಟಿಗಳನ್ನು ಒಯ್ದುದ್ದರಿಂದ ಸಾತಾರೆಯ ಅಧಿಪತಿಗಳು ಇದಕ್ಕೆ ತಾವು ಪಟ್ಟಿಗಳನ್ನು ಕೂಡಿಸಿ ಕೊಟ್ಟಿರುತ್ತಾರೆ. ಈ ಪೆಟ್ಟಿಗೆಯನ್ನು ಯಾರಿಗೂ ತೆರೆಯಗೊಡುವದಿಲ್ಲ. ಹಬ್ಬದ ದಿವಸದಲ್ಲಿ ಮಾತ್ರ ಕೋಣೆಯನ್ನು ತೆರೆದು ಪೆಟ್ಟಿಗೆಯ ಪೂಜೆಯನ್ನು ಮಾಡುತ್ತಾರೆ. ಇದಲ್ಲದೆ ಈ ಇಮಾರತಿಯಲ್ಲಿ ಆ ಕಾಲದಲ್ಲಿ ದೊಡ್ಡ ಪುಸ್ತಕ ಸಂಗ್ರಹವಿತ್ತು. ಕಳ್ಳರ ಮತ್ತು ಬಲಿಷ್ಠರ ಹಾವಳಿಗಳಿಂದ ಉಳಿದ ಪುಸ್ತಕಗಳನ್ನು ಮಾತ್ರ ಈಗ ಬೇರೆ ಕಡೆಯಲ್ಲಿ ಇಟ್ಟಿರುತ್ತಾರೆ. ಇಲ್ಲಿಯ ಅತ್ಯುತ್ತಮ ರತ್ನಗಂಬಳಿಯನ್ನು ಮಾತ್ರ ಗೋಳಗುಮಟದ ನಗಾರಖಾನೆಯಲ್ಲಿ ಇಟ್ಟಿರುತ್ತಾರೆ.

ಈ ಇಮಾರತಿಗೆ ನಾಲ್ಕು ಹೆಬ್ಬಾಗಿಲುಗಳಿದ್ದು ಅವುಗಳಲ್ಲಿ ಪೂರ್ವದ ಬಾಗಿಲು ಮಾತ್ರ ಮುಚ್ಚಲ್ಪಟ್ಟಿರುತ್ತದೆ. ದಕ್ಷಿಣದ ಎರಡು ಬಾಗಿಲುಗಳು ಹಾಗು ಉತ್ತರದ ಒಂದು ಬಾಗಿಲು ಮಾತ್ರ ಯಾವಾಗಲೂ ತೆರೆದಿರುತ್ತದೆ. ಪಶ್ಚಿಮಕ್ಕೆ ಕಂದಕವಿರುವದರಿಂದ ಆ ದಿಕ್ಕಿಗೆ ಬಾಗಿಲು ಇರುವದಿಲ್ಲ. ಎರಡನೆಯ ಅಂತಸ್ತಿನಿಂದ ಅರಮನೆಗೆ ಹೋಗಲಿಕ್ಕೆ ಮಾರ್ಗವು ಮಾತ್ರ ಇತ್ತಕಡೆಯಿಂದ ಇರುತ್ತದೆ.

ದಕ್ಷಿಣ ದಿಕ್ಕಿನಿಂದ ಇಮಾರತಿಯಲ್ಲಿ ಪ್ರವೇಶಿಸಿದ ಕೂಡಲೆ ಭವ್ಯವೂ ವಿಸ್ತೀರ್ಣವೂ ಆದ ಅಂಗಣವು ಹತ್ತುತ್ತದೆ. ಬಳಿಕ ಒಂದು ಹೌದಿನಂತಹ ಹೊಂಡವು ಇರುತ್ತದೆ. ಈ ಹೌದಿಗೆ ಬೇಗಮ್ಮನ ಕೆರೆಯಿಂದ ನೀರು ತಂದಿದ್ದಾರೆ. ಈ ನೀರು ಬಹು ಪಾಚಕವಾಗಿರುತ್ತದೆಂದು ಪ್ರಸಿದ್ಧ ಇರುತ್ತದೆ. ಈ ಹೊಂಡದ ಸುತ್ತುಮುತ್ತಲು ಅನೇಕ ಸಣ್ಣ ಸಣ್ಣ ಹೌದುಗಳಿದ್ದು ಆ ಕಾಲದಲ್ಲಿ ಇವುಗಳಲ್ಲಿ ಮೊಸಳೆಗಳನ್ನು ತಂದು

ಬಿಡುತಿದ್ದರಂತೆ! ಸುತ್ತಲಿನ ಅಂಗಣದಲ್ಲಿ ಹೂದೋಟವಿತ್ತಂತೆ. ನಿವಾಜು ಮಾಡುವ ಜನರ ಮುಖಮಾರ್ಜನಕ್ಕಾಗಿಯೂ ಅರಸುಮನೆತನದವರ ನೀರಾಟಕ್ಕಾಗಿಯೂ ಈ ಹೌದನ್ನು ಕಟ್ಟಿಸಿರಬೇಕೆಂದು ತೋರುತ್ತದೆ.

ಮುಖ್ಯ ಇಮಾರತಿಯ ಕೆಳಗಿನ ಅಂತಸ್ತಿನಲ್ಲಿ ಒಂದು ಹಳದೀ ಕಲ್ಲಿನ ಗದ್ದುಗೆಯನ್ನು ನೋಡುವದಾದನಂತರ ಉತ್ತರ ಭಾಗದಲ್ಲಿರುವ ಅಲ್ಲಾನ ಸ್ಥಾನವನ್ನು ನೋಡಿ ಮಾಳಿಗೆಯನ್ನು ಏರಬಹುದು. ಈ ಹಳದೀ ಗದ್ದುಗೆಯನ್ನು ಪರದೇಶದಿಂದ ತರಿಸಿದ್ದರು. ಇದರಲ್ಲಿ ರಾಸಾಯನಿಕ ಗುಣವಿರುತ್ತದೆಂದು ಹೇಳುತ್ತಾರೆ. ಮಾಳಿಗೆಗೆ ಹೋಗಲಿಕ್ಕೆ ದಕ್ಷಿಣ ದಿಕ್ಕಿನಲ್ಲಿ ಬಾಗಿಲು ಇದ್ದು ಅದು ಯಾವಾಗಲೂ ಮುಚ್ಚಿರುತ್ತದೆ. ಕಾವಲುಗಾರನಿಗೆ ಹೇಳಿದರೆ ಅವನು ಆ ಬಾಗಿಲನ್ನು ತೆರೆದು ಎಲ್ಲ ಮಾಳಿಗೆಯನ್ನು ತೋರಿಸುವನು. ಒಂದು ಸಣ್ಣ ಸಭಾಮಂದಿರ (ದಿವಾಣಖಾನೆ) ಕ್ಕೆ ಆ ಕಾಲದಲ್ಲಿ ಕೊಟ್ಟ ಬಣ್ಣವು, ಜಪಮಾಲೆಗಳು, ಬಾಗಿಲುಗಳಲ್ಲಿ ಆನೇಕೋರೆಯ ಕೆತ್ತಿಗೆಯ ಕೆಲಸವು, ಕಿಡಿಕೆಯಲ್ಲಿರುವ ಕಟ್ಟಿಗೆಯ ಜಾಳಿಗೆಯ ಕೆಲಸವು, ಒಂದು ಕೂಡ್ರುವ ಮಂಚವು, ಇವೆಲ್ಲ ಮಾಳಿಗೆಯ ಮೇಲೆ ನೋಡತಕ್ಕವುಗಳಾಗಿವೆ.

## ೫ ಅರ್ಕಕೋಟೆ [ಅರಕಿಲ್ಲೆಯು].

ಅಸಾರಮಹಾಲಿನ ಮೇಲಿನ ದಕ್ಷಿಣ ಕಡೆಯ ಹೆಬ್ಬಾಗಿಲಿಂದ ಹೊರಬಿದ್ದು ಈ ಕೋಟೆಯಲ್ಲಿ ಪ್ರವೇಶಿಸಬಹುದು. ಹೊರಬಿದ್ದ ಕೂಡಲೆ ಈ ಕೋಟೆಯು ಬುರುಜಿನ ಮೇಲಿರುವ ಚಿಚದಡ್ಡೀ ಎಂಬ ಮಸೀದೆಯು ಕಾಣಹತ್ತುತ್ತದೆ.

ಅರ್ಕ ಶಬ್ದದ ಅರ್ಥವು ಸೂರ್ಯನೆಂತಾಗುತ್ತದೆ. ಔರಂಗಾಬಾದ ಕೋಟೆಯ ಹೆಸರಿಗೂ ಅರ್ಕ ಎಂಬ ಶಬ್ದವನ್ನು ಜೋಡಿಸಿರುತ್ತಾರೆ. ಕನ್ನಡದಲ್ಲಿ 'ಅರ' ಶಬ್ದವು ಅರಸು ಶಬ್ದದ ಸಂಕ್ಷಿಪ್ತರೂಪವು. ಈ ಕೋಟೆಗೆ ಜನರು ಅರಕಿಲ್ಲೆಯನ್ನುತ್ತಾರೆ. ಯಾವ ಅರ್ಥವನ್ನು

ಸ್ವೀಕರಿಸಿದರೂ ಅಡ್ಡಿಯಿಲ್ಲ. ಅರಮನೆಯ ಕಟ್ಟಡಗಳ ಸುತ್ತಲು ಈ ಕೋಟೆಯು ಇರುವದು.

ಈ ಕೋಟೆಯನ್ನು ಆದಿಲಶಾಯಿಯ ಸ್ಥಾಪಕನು ಇ. ಸ. ೧೪೮೯ ರಲ್ಲಿ ಸಾಧಾರಣ ತರದ ಮಣ್ಣಿನಿಂದಲೇ ಬಿಜ್ಜನಹಳ್ಳಿ ಮೊದಲಾದ ಹಳ್ಳಿಗಳನ್ನು ಮುರಿದು ಕಟ್ಟಿಸಿದನು. ಮುಂದೆ ಇವನ ಮೊಮ್ಮಗನು ಗಟ್ಟಿಮುಟ್ಟಾಗಿ ಕಲ್ಲಿನಿಂದ ಕಟ್ಟಿಸಿದನು. ಇದಕ್ಕೆ ಎಷ್ಟು ಬುರುಜು ಗಳೂ ಅಗಸೆಗಳೂ ಇದ್ದವೋ ಹೇಳಲಿಕ್ಕಾಗದು. ಈಗ ಈ ಕೋಟೆಯ ದಕ್ಷಿಣ ಹಾಗು ಪೂರ್ವದ ಭಾಗವು ಮಾತ್ರ ಉಳಿದಿರುತ್ತದೆ. ಈಗ ಒಂದೇ ಅಗಸೆಯು ಮಾತ್ರ ಇದ್ದು ಅಲ್ಲಿಂದಲೇ ಜುಮ್ಮಾಮಸೀದೆಗೆ ಮಾರ್ಗವು ಹೋಗಿರುತ್ತದೆ. ಈ ಅಗಸೆಯ ಹತ್ತರಿದ್ದ ಒಂದು ದೊಡ್ಡ ಗುಡಿಯನ್ನು ಕೆಡವಿ ಈ ಅಗಸೆಯನ್ನು ಕಟ್ಟಿರುತ್ತಾರೆ. ಈ ಅಗಸೆಯ ಶಿರೋಭಾಗದಲ್ಲಿ ಒಂದು ದೊಡ್ಡ ಕಲ್ಲು ಕೂಡ್ರಿಸಲ್ಪಟ್ಟಿದ್ದು, ಅದರ ಮೇಲೆ ಒಂದು ಲೇಖವು ಇರುತ್ತದೆ. "ಇಕತ್ಯಾರಖಾನ ಗುಜರಾಥಿ" ಎಂಬವನು ದೊಡ್ಡ ಇಬ್ರಾಹಿಮ ಬಾದಶಹನ ಕಾಲದಲ್ಲಿ ಈ ಅಗಸೆ ಯನ್ನು ಕಟ್ಟಿಸಿದನೆಂದು ಬರೆದಿರುತ್ತದೆ.

ಕೋಟೆಯ ಪರೀಘವು ಒಂದು ಮೈಲು ಇದ್ದು ಇದರಲ್ಲಿ ಆ ಕಾಲದ ಹನ್ನೆರಡು ಇಮಾರತಿಗಳು ಇರುತ್ತವೆ. ಇವುಗಳಲ್ಲಿ ನಾಲ್ಕು ಮಾತ್ರ ಸರಕಾರೀ ಅಧಿಕಾರಸ್ಥರಿಗೆ ಇರಲಿಕ್ಕೂ ಕಚೇರಿ ಮಾಡಲಿಕ್ಕೂ ಉಪಯೋಗಿಸಲ್ಪಡುವದರಿಂದ ನೋಡಲಿಕ್ಕೆ ಸಿಗುವಂತಿಲ್ಲ. ಇವುಗಳಲ್ಲಿ ಯಾದರೂ ಒಂದು ಆನಂದಮಹಾಲಿನ ಹೊರತು ಉಳಿದವು ನೋಡ ತಕ್ಕವುಗಳಾಗಿರುವದಿಲ್ಲ. ಉಳಿದ ೮ ಕಟ್ಟಡಗಳಲ್ಲಿ (೧) ಮಕ್ಕಾ ಮಸೀದೆಯ ಕೀಲಿಕೈ ಮಾತ್ರ ಇಂಜಿನಿಯರ ಖಾತೆಯವರ ಕಡೆಗೆ ಇರುತ್ತದೆ. ನೋಡಲಿಚ್ಛಿಸುವವರು ಅವರಿಂದ ಅದನ್ನು ದೊರಕಿಸ ಬೇಕಾಗುತ್ತದೆ. (೨) ಸೋನೇರಿ ಮಹಾಲ ಅಥವಾ ಈಗಿನ ಕ್ರೈಸ್ತ ಗುಡಿಯ ಕೀಲಿಕೈ ಮಾತ್ರ ಅಲ್ಲಿಯೇ ಇರುವ ಮಾಮಲೇದಾರರ



ಪಾಂಡವರ ಗುಡಿ.

ಕಚೇರಿಯ ಚಿಕ್ಕ ಸೆರೆಮನೆಯ ಕಾವಲುಗಾರರ ಕೈಯಲ್ಲಿರುತ್ತದೆ. ಬೇಡಿದರೆ ಅವರು ಕೊಡುತ್ತಾರೆ, (೩) ಕರೀಮುದ್ದೀನನ ಗೋರಿ. (೪) ಗಗನಮಹಾಲ (೫) ಶ್ರೀ ದತ್ತಮಂದಿರ (೬) ಏಳಂತಸ್ತಿನ ಇಮಾರತಿ (೭) ಚೀನೀಮಹಾಲ (೮) ಚಿಂಚದಿಡ್ಡೀ ಮಸೀದೆ ಇವುಗಳನ್ನು ಮಾತ್ರ ಹಗಲುಹೊತ್ತಿನಲ್ಲಿ ಬೇಕಾದವರು ನೋಡಬಹುದು.

ಕೋಟೆಯ ಸುತ್ತಲಿನ ಕಂದಕವು ಬಹಳ ಮಟ್ಟಿಗೆ ಮುಚ್ಚಿರುತ್ತದೆ. ಪೂರ್ವದಲ್ಲಿ ಇಲ್ಲಿ ವಿಪುಲವಾಗಿ ನೀರಿದ್ದದರಿಂದ ಮೊಸಳೆಗಳು ಇರುತಿದ್ದವು. ಅಗಸೆಯ ಹೊರತು ಒಳಗೆ ಪ್ರವೇಶಿಸುವದು ಕಠಿಣವಾಗಿತ್ತು. ಕೋಟೆಗೆ ಶತ್ರುಗಳು ಮುತ್ತಿಗೆಯನ್ನು ಹಾಕಿದರೆ ಅವರಿಗೆ ನೀರಿನ ಕೊರತೆಯಾಗ ಬೇಕೆಂದು ಬೇಕಾದಾಗ ಇಲ್ಲಿಯ ಕಂದಕದ ನೀರನ್ನು ಶಹರದ ಸುತ್ತಲಿನ ಕಂದಕಕ್ಕೆ ಬಿಡುವಂತೆ ವ್ಯವಸ್ಥೆಯಿತ್ತು.

**ಕರೀಮುದ್ದೀನನ ಗೋರಿಯು:**—ದೇವಗಿರಿಯ ಯಾದವರು ನಾಶವಾದ ಬಳಿಕ ಅಲ್ಲಾವುದ್ದೀನ ಖಿಲಜಿಯು ವಿಜಾಪುರ ಸುಭೇದಾರಿ ಯನ್ನು ಮಲೀಕ ಜಾಫರನಿಗೆ ಕೊಟ್ಟಿದ್ದನು. ಸತ್ತನಂತರ ಅದು ಅವನ ಮಗನಿಗೆ ದೊರೆಯಿತು. ಆ ಹುಡುಗನು ಊರಲ್ಲಿ ವಾಸಮಾಡಿ ಕೊಂಡಿದ್ದನೆಂದು ಹೇಳುತ್ತಾರೆ. ಅವನು ಇಲ್ಲಿಯೇ ಮರಣ ಹೊಂದಿ ದನು. ಅವನನ್ನು ಹೇಮಾಡಪಂತೀ (ಇದೇ ಗುಡಿಗೆ ಪಾಂಡವರ ಗುಡಿ ಅನ್ನುತ್ತಾರೆ) ದೇವಾಲಯದ ಪಟಾಂಗಣದ ಆಗ್ನೇಯ ಮೂಲೆಯಲ್ಲಿ ಹುಗಿದಿರುತ್ತಾರೆ. ಈ ದೇವಾಲಯದ ಮತ್ತು ಜುಮ್ಮಾಮಸೀದೆ ಅದಾ ಲತ್ ಮಹಾಲ ಇವುಗಳ ಮಧ್ಯದಲ್ಲಿರುವ ಬೇರೆ ದೇವಾಲಯಗಳ ಕಟ್ಟುವಿಕೆಯಿಂದ ಈ ಊರು ಕ್ರಿ. ಶ. ೧೧೦೦ಕ್ಕಿಂತ ಮುಂಚೆಯೇ ಪ್ರಸಿದ್ಧವಾಗಿರಬೇಕೆಂದು ತೋರುತ್ತದೆ.

**ಮಕ್ಕಾಮಸೀದೆ:**—ಇದು ಈ ಕೋಟೆಯಲ್ಲಿ ಪೂರ್ವದಿಕ್ಕಿಗೆ ಇದ್ದು ಸುತ್ತಲು ಗೋಡೆಯಿರುವದರಿಂದ ಸಮೀಪಕ್ಕೆ ಹೋದ ಹೊರತು ಕಾಣಿ ಸುವದಿಲ್ಲ. ಇದು ಈಗಲೂ ಹೊಸದಾಗಿ ಕಟ್ಟಿದಂತೆಯೇ ಕಾಣುತ್ತದೆ.

ಇದು ಮುಚ್ಚಿರುವದರಿಂದಲೇ ಶತ್ರುಗಳ ಹಾಗು ಕಾಲನ ಅಧಿಕಾರವು ಇದರ ಮೇಲೆ ನಡೆದಂತೆ ಕಾಣುವದಿಲ್ಲ. ಮಕ್ಕೆಯೊಳಗಿನ ಮುಖ್ಯ ಮಸೀದೆಯ ಮಾದರಿಯಂತೆ ಇದು ಇರುವದರಿಂದ ಇದಕ್ಕೆ ಈ ಹೆಸರು ಬಂದಿರುತ್ತದೆ. ಒಂದು ಸಣ್ಣ ಕಟ್ಟಿಗೆಯ ಮಾದರಿಯು ಆಸಾರ ಮಹಾಲಿನಲ್ಲಿ ಬಿದ್ದಿರುತ್ತದೆ. ಅದನ್ನು ಅರಬಸ್ಥಾನದಿಂದ ತರಿಸಿ ಅದಕ್ಕನುಸರಿಸಿಯೇ ಈ ಮಸೀದೆಯು ಕಟ್ಟಲ್ಪಟ್ಟಿರುವದೆಂದು ಅನೇಕರ ತರ್ಕವಿರುತ್ತದೆ. ಯಾರು ಕಟ್ಟಿಸಿದರೆಂಬುದು ಮಾತ್ರ ತಿಳಿಯುವದಿಲ್ಲ. ಇದು ಸಣ್ಣದಿರುವದರಿಂದಲೂ, ಸುತ್ತಲು ಗೋಡೆಗಳಿಂದ ಮುಚ್ಚಿರುವದರಿಂದಲೂ ಅರಮನೆಯೊಳಗಿನ ಸ್ತ್ರೀಯರ ಸಲುವಾಗಿ ಇದ್ದಿರಬಹುದೆಂದು ತೋರುತ್ತದೆ. ಸಣ್ಣ ಇಬ್ರಾಹಿಮನಿಗೆ ಜಹಾಬೇಗಮ್ ಎಂಬ ಮಗಳಿದ್ದಳು. ಅವಳು ಈ ಮಸೀದೆಯನ್ನೂ ಜಂಜರೀ ಮಸೀದೆಯನ್ನೂ ಕಟ್ಟಿಸಿದಳೆಂದು ಹೇಳುತ್ತಾರೆ.

**ಗಗನಮಹಾಲ:—**ಈ ಕಟ್ಟಡವು ತೀರ ಮುರುಕಳಿಗೆ ಬಂದಿರುತ್ತದೆ. ಹತ್ತರ ಹೋಗಿ ನೋಡುವವರು ಬಿದ್ದೀತೆಂದು ಅಂಜುತ್ತಾರೆ. ಮೇಜರ ಟೇಲರ ಎಂಬವರು ಬರೆದ "ತಾರಾ" ಅಥವಾ 'ನೋಬಲ ಕ್ವೀನ' ಎಂಬ ಕಾದಂಬರಿಯನ್ನು ಓದಿದವರಿಗೆ ಈ ಮಹಾಲಿನ ವಿಷಯವಾಗಿ ಹೆಚ್ಚಿಗೆ ಹೇಳುವ ಅವಶ್ಯಕತೆ ಇರುವದಿಲ್ಲ. ಇಂಗ್ಲಿಷ ಭಾಷೆಯನ್ನರಿತವರು ಈ ಪುಸ್ತಕಗಳನ್ನು ಅವಶ್ಯವಾಗಿ ಓದಬೇಕು. ಆ ಕಾಲದ ದರಬಾರವೂ ಆದರಲ್ಲಿ ನಡೆಯುವ ಕಾರಸ್ಥಾನಗಳೂ ಇದರಲ್ಲಿ ಚೆನ್ನಾಗಿ ವರ್ಣಿಸಲ್ಪಟ್ಟಿರುತ್ತವೆ.

ದೊಡ್ಡ ಅಲ್ಲಿಆದಿಲಶಹನು ದರಬಾರಕ್ಕಾಗಿಯೂ ಸಿಂಹಾಸನವನ್ನು ಇಡುವದಕ್ಕಾಗಿಯೂ ಈ ಇಮಾರತಿಯನ್ನು ಕಟ್ಟಿಸಿದನು. ಇದಕ್ಕೂ ಮೊದಲು ಸಿಂಹಾಸನವನ್ನು ಚೀನೀ ಮಹಾಲದಲ್ಲಿ ಇಡುತಿದ್ದರೆಂದು ತೋರುತ್ತದೆ. ಆ ಕಾಲದಲ್ಲಿ ಅರಮನೆಯೊಳಗೆ ಇದೇ ಎತ್ತರವಾದ ಕಟ್ಟಡವಾದ್ದರಿಂದ ಇದಕ್ಕೆ "ಗಗನಮಹಾಲ" ಎಂದು ಹೆಸರಿಟ್ಟರು.

ಮಹಮ್ಮೂದಶಹನ ಆಳಿಕೆಯಲ್ಲಿ ಇದಕ್ಕೆ ಬೆಂಕಿ ಹತ್ತಿದರಿಂದ ಸಿಂಹಾಸನವನ್ನು ಪುನಃ ಚೀನೀ ಮಹಾಲಿಗೇ ಒಯ್ದರು. ಈ ಇಮಾರತಿಯ ಎದುರಿಗೆ ಮೂರು ಕಮಾನಿನ ಒಂದು ಗೋಡೆಯು ಇರುತ್ತದೆ. ಇವುಗಳಲ್ಲಿ ನಡುವಿನ ಕಮಾನಿನ ಅಗಲಳತೆಯು ೬೦ ಫೂಟು ಇದ್ದು ಎತ್ತರವಾದರೂ ಅಷ್ಟೇ ಇರುತ್ತದೆ.

**ಆನಂದಮಹಾಲ, ಅದಾಲತಮಹಾಲ, ಮತ್ತು ಅರಶೇಮಹಾಲ:**—ಈ ಇಮಾರಂತಿಗಳನ್ನು ಸದ್ಯಕ್ಕೆ ಸರಕಾರೀ ಅಧಿಕಾರಸ್ಥರಿಗೆ ಇರಲಿಕ್ಕೆ ಕೊಟ್ಟಿದ್ದರಿಂದ ನೋಡಲಿಕ್ಕೆ ಸಿಗುವಂತಿಲ್ಲ. ಆನಂದಮಹಾಲದಲ್ಲಿ ಇಬ್ಬರು ಅಸಿ|| ಕಲೆಕ್ಟರರು ಇರುತಿದ್ದು ಅದರ ಪೌಳಿಯಲ್ಲೇ ಅವರ ಕಚೇರಿಗಳಿರುತ್ತವೆ. ಇದೊಂದೇ ಇಮಾರತಿಯು ಇವುಗಳಲ್ಲಿ ನೋಡತಕ್ಕದ್ದಿರುತ್ತದೆ. ಆದರೆ ನೋಡಲಿಕ್ಕೆ ದೊರೆಯದಿರುವ ಕಾರಣವನ್ನು ಮೇಲೆ ಹೇಳಿರುತ್ತೇವೆ. ಸಣ್ಣ ಇಬ್ರಾಹಿಮನು ಆನಂದಮಹಾಲನ್ನೂ, ಮಹಮ್ಮೂದಶಹನು ಅದಾಲತ ಮಹಾಲನ್ನೂ ಸಣ್ಣ ಅಲ್ಲಿಯು ಅರಶೇ ಮಹಾಲನ್ನೂ ಕಟ್ಟಿಸಿದರು.

**ಸೋನೇರಿಮಹಾಲ:**—ಇದು ಈಗ ಕ್ರೈಸ್ತ ಗುಡಿಯಾಗಿದೆ. ಇಲ್ಲಿಂದ ಗಗನ ಮಹಾಲಿನ ದಿವಾಣಖಾನೆಗೆ ಬರಲಿಕ್ಕೆ ದಾರಿಯಿತ್ತೆಂದು ಹೇಳುತ್ತಾರೆ. ಜುಮ್ಮಾ ಮಸೀದೆಯಂತೆ ಇಲ್ಲಿಯೂ ಕೆತ್ತಿಗೆಯ ಕೆಲಸವನ್ನು ಮಾಡಿರುತ್ತಾರೆ.

**ಏಳಂತಸ್ತಿನ ಇಮಾರತಿ:**—ಸೋನೇರಿ ಮಹಾಲಿನಿಂದ ಪಶ್ಚಿಮಕ್ಕೆ ಹೋಗಿರುವ ಮಾರ್ಗದಿಂದ ತುಸು ಮುಂದಕ್ಕೆ ಹೋದಕೂಡಲೆ ಎತ್ತರವಾದ ಶಿಖರುಳ್ಳ ಒಂದು ಇಮಾರತಿಯು ಕಾಣಿಸುತ್ತದೆ. ಅದೇ ಈ ಏಳಂತಸ್ತಿನ ಇಮಾರತಿಯು. ಇದರ ಎದುರಿಗೆ ಒಂದು ಸಣ್ಣ ರಥದಂತೆ ಮಾಟವಾದ ಒಂದು ಕಟ್ಟಡವು ಇರುತ್ತದೆ. ಅದಕ್ಕೆ "ಪಾಣೀಮಹಾಲ" ಎನ್ನುತ್ತಾರೆ.

ಈ ಇಮಾರತಿಯು ಸ್ವತಂತ್ರವಾಗಿರದೆ ಚೀನೀ ಮಹಾಲಿನ ವಾಯವ್ಯ ಮೂಲೆಯೇ ಆಗಿರುತ್ತದೆ. ಗಗನಮಹಾಲಿಗೆ ಬೆಂಕಿ ಹತ್ತಲು ಸೇನೆಯ ಕವಾಯತನ್ನೂ ಪಟ್ಟಣದೊಳಗಿನ ಮೋಜುಗಳನ್ನೂ ನೋಡಲಿಕ್ಕೆ ಅರಮನೆಯಲ್ಲಿ ಎತ್ತರವಾದ ಸ್ಥಳವು ಇಲ್ಲದಂತಾಯಿತು. ಅದಕ್ಕೋಸ್ಕರ ಚೀನೀಮಹಾಲಿನ ವಾಯವ್ಯ ಮೂಲೆಯಲ್ಲಿಯೇ ಈ ಏಳಂತಸ್ತಿನ ಇಮಾರತಿಯನ್ನು ಕಟ್ಟಿಸಿರಬಹುದು. ಏಳರಲ್ಲಿ ಈಗ ಐದು ಅಂತಸ್ತುಗಳು ಮಾತ್ರ ಉಳಿದಿರುತ್ತವೆ. ಕೆಳಗಿನ ಅಂತಸ್ತಿನಲ್ಲಿ ಸರಕಾರಿ ಕಾಗದಪತ್ರಗಳನ್ನು ಇಟ್ಟಿರುವದರಿಂದ ಉಳಿದ ಅಂತಸ್ತುಗಳು ಮಾತ್ರ ನೋಡಲಿಕ್ಕೆ ದೊರೆಯುವಂತಿವೆ. ಚೀನೀ ಮಹಾಲಿನ ಪಟಾಂಗಣಕ್ಕೆ ಹೋಗಲಿಕ್ಕೆ ಇಲ್ಲಿಂದ ಅಗಸೆಯಂಥ ಮಾರ್ಗವಿದ್ದು ಪಾವಟಿಗೆಗಳನ್ನು ಕಟ್ಟಿಸಿರುತ್ತಾರೆ. ಇಲ್ಲಿಂದ ಮೇಲೆ ಹೋಗಲಿಕ್ಕೆ ಬರುತ್ತದೆ. ಮೊದಲನೆಯ ಅಂತಸ್ತಿನಲ್ಲಿ ವಿಶೇಷವೇನೂ ಇರುವದಿಲ್ಲ. ಎರಡನೆಯ ಅಂತಸ್ತಿನಲ್ಲಿ ಮಹಮ್ಮೂದಶಹನ ಹಾಗು ಅವನ ರಾಣಿಯಾದ ರಂಭಾವತಿಯ ಚಿತ್ರಗಳನ್ನು ಗೋಡೆಯ ಮೇಲೆ ತೆಗೆದಿರುತ್ತಾರೆ. ಈ ಅಂತಸ್ತಿನಲ್ಲಿ ಗೋಡೆಗೆ ಚಿನ್ನದ ಮುಲಾಮು ಮಾಡಿದ್ದರು. ಆದರೆ ದ್ರವ್ಯದ ಆಶೆಯಿಂದ ಯಾರೋ ಅದನ್ನು ಕೆದರಿ ಒಯ್ದಿರುತ್ತಾರೆ. ಈಗಾದರೂ ಗೆರೆಗಳು ದೃಷ್ಟಿಗೆ ಬೀಳುತ್ತವೆ. ಎಲ್ಲ ಅಂತಸ್ತಿನಲ್ಲಿ ನಟ್ಟನಡುವೆ ಕಾರಂಜಿಯು ಇದ್ದು ಆ ಕಾಲದಲ್ಲಿ ಅವುಗಳಲ್ಲಿ ನೀರಿತ್ತು. ಐದನೆಯ ಅಂತಸ್ತಿಗೆ ಹೋಗುವದು ಬಿಕ್ಕಟ್ಟಾಗಿರುವದರಿಂದ ಬಿಡುವದೇ ಲೇಸು.

**ಚೀನೀಮಹಾಲ:—** ಏಳಂತಸ್ತಿನ ಇಮಾರತಿಯನ್ನು ನೋಡುವದಾದ ಬಳಿಕ ಈ ಮಹಾಲಿಗೆ ಬರಬೇಕಾಗುತ್ತದೆ. ಇದಕ್ಕೆ ಈ ಹೆಸರು ಬರಲಿಕ್ಕೆ ಕಾರಣವೇನೋ ತಿಳಿಯದು. ಆದರೆ ಈ ಶಹರವು ಜಿಲ್ಲೆಯ ಸ್ಥಳವಾಗುವದಕ್ಕೆ ಮುಂಚೆ ದುರಸ್ತಿಯ ಕೆಲಸವು ನಡೆದಾಗ ಇಲ್ಲಿ ಅನೇಕ ಚೀನೀ ಮಣ್ಣಿನ ಪಾತ್ರೆಗಳು ದೊರೆತದ್ದರಿಂದ ಈ ಹೆಸರು ಬಂದಿರಬೇಕೆಂದು ತೋರುತ್ತದೆ.

ಈ ಇಮಾರತಿಯನ್ನು ಆದಿಲಶಾಹಿಯ ಸ್ಥಾಪಕನಾದ ಯುಸೆಫನು ಸಾಧಾರಣ ಪ್ರತಿಯಾಗಿ ಕಟ್ಟಿಸಿದನು. ಮುಂದೆ ಶಿಲ್ಪಕಲೆಯು ಅಭಿವೃದ್ಧಿಯನ್ನು ಹೊಂದುತ್ತ ನಡೆದುದರಿಂದ ಮುಂದಿನ ಅರಸರು ತಮ್ಮ ಇಚ್ಛೆಯಂತೆ ಅದನ್ನು ಬೆಳಿಸಿರಬಹುದು. ದರಬಾರದ ಜನರಲ್ಲಿ ವೈಮನಸ್ಸು ಹುಟ್ಟಿ ಅರಸನ ಜೀವಕ್ಕೆ ಗಂಡಾಂತರ ಬಂದೊದಗಿದಾಗ ಈ ಇಮಾರತಿಯೊಳಗಿನ ಸಿಂಹಾಸನವನ್ನು ಗಗನಮಹಾಲದಲ್ಲಿ ಒಯ್ದಿಟ್ಟಿರಬಹುದು. ಗಗನ ಮಹಾಲಿಗೆ ಬೆಂಕಿ ಹತ್ತಲು ಪುನಃ ಆ ಸಿಂಹಾಸನವು ಮೊದಲಿನ ತನ್ನ ಸ್ಥಳಕ್ಕೆ ಬಂದಿತು.

ಈ ಇಮಾರತಿಯು ಬಹುತರವಾಗಿ ಸರಕಾರೀ ಕಚೇರಿಗಳಿಂದ ತುಂಬಿಹೋಗಿದೆ. ಮೊದಲು ಹತ್ತುವ ಪೌಳಿಯಲ್ಲಿ ಕಾಗದಪತ್ರಗಳ ಕಚೇರಿ ಇರುತ್ತದೆ. ಮುಖ್ಯ ಇಮಾರತಿಯ ಪಶ್ಚಿಮ ಭಾಗವು ನ್ಯಾಯ ಖಾತೆಗೆ ಒಪ್ಪಿಸಲ್ಪಟ್ಟಿದ್ದು ಮೇಲುಪ್ಪರಿಗೆಯಲ್ಲಿ ಜಡ್ಜ ಸಾಹೇಬರ ಕೋರ್ಟು, ಕೆಳಗೆ ಮುನಸೀಪ್ ಕೋರ್ಟು ಇರುತ್ತವೆ. ಪೂರ್ವಭಾಗವು ಮುಲಕೀ ಖಾತೆಯವರಿಗೆ ಒಪ್ಪಿಸಲ್ಪಟ್ಟಿದ್ದು, ಮೇಲುಪ್ಪರಿಗೆಯಲ್ಲಿ ಕಲೆಕ್ಟರ ಸಾ|| ರ ಚಿಟಣೀಸರ ಕಚೇರಿಯೂ, ಕೆಳಗೆ ಸರಕಾರಿ ಖಜಾನೆಯೂ, ಇರುತ್ತವೆ. ನಡುವಿನ ಭಾಗವು (ದಿವಾಣ ಖಾನೆ) ಬರಿದಾಗಿದ್ದು ಅಲ್ಲಿ ಈಗಿನ ದರಬಾರಗಳನ್ನು ಕೂಡಿಸುತ್ತಾರೆ. ಇಲ್ಲಿಯೇ ಆದಿಲಶಾಹಿಯ ಸಿಂಹಾಸನವಿತ್ತು. ಈ ದಿವಾಣಖಾನೆಯ ಉದ್ದಳತೆ ೧೨೮-೧೨೫ ಫೂಟು ಇರುತ್ತದೆ.

**ಶ್ರೀ ದತ್ತಮಂದಿರ:**—ब्रम्हानंदं परमसुखदं केवलं ज्ञानमूर्ति।
द्वंद्वातीतं गगनसदृशं तत्वमस्यादिलक्ष्यं ॥
एकं नित्यं विमलमचलं सर्वधीसाक्षिभूतं ।
भावातीतं त्रिगुणरहितं सद्गुरुं तं नमामि ॥

ಚೀನೀ ಮಹಾಲನ್ನು ನೋಡುವದಾದನಂತರ ಏಳಂತಸ್ತಿನ ಇಮಾರತಿಯ ಮೂಲೆಯೊಳಗಿಂದ ಹೊರಬಿದ್ದು ಬರಬಹುದು. ಒಂದು ದೊಡ್ಡ

ವಟವೃಕ್ಷದ ಕೆಳಗೆ ಕಂದಕದ ದಂಡೆಯ ಮೇಲೆ ಉತ್ತರ ದಿಕ್ಕಿಗೆ ಕಾಣಿಸುವ ದೇವಾಲಯವೇ ಶ್ರೀನೃಸಿಂಹ ಸರಸ್ವತಿಯವರು ಸ್ಥಾಪಿಸಿದ ಶ್ರೀ ದತ್ತ ಮಂದಿರವು.

ಮುಸಲ್ಮಾನರ ಆಳಿಕೆಯಲ್ಲಿ ಈ ದೇವಾಲಯವು ಹೇಗೆ ಅರಮನೆಯ ನೆರೆಯಲ್ಲಿ ಬಂದಿತೆಂಬುದರ ಬಗ್ಗೆ ಕೆಲವರು ಆಶ್ಚರ್ಯಪಡಬಹುದು. ಆದರೆ ಕೆಳಗೆ ವಿವರಿಸಿದ ಸಂಗತಿಯನ್ನು ಓದಿದರೆ ಈ ಆಶ್ಚರ್ಯವು ಹೋಗಿ ಭಕ್ತಿಯು ಹುಟ್ಟದೆ ಇರದು.

ಸಣ್ಣ ಇಬ್ರಾಹಿಮನಿಗೆ ಮಹಾರೋಗವಾಗಿತ್ತು. ಯಾವ ಉಪಾಯದಿಂದಲೂ ಈ ರೋಗವು ಹಿಮ್ಮೆಟ್ಟಲಿಲ್ಲ. ಗಾಣಗಾಪುರದಲ್ಲಿರುವ ಮಹಾ ಸ್ವಾಮಿಗಳಾದ ಶ್ರೀ ನೃಸಿಂಹ ಸರಸ್ವತಿಯವರು, ಬೇಕಾದ ರೋಗಗಳನ್ನು ತಮ್ಮ ತಪೋಬಲದಿಂದ ವಾಸಿಮಾಡಬಲ್ಲರೆಂಬ ಸುದ್ದಿಯನ್ನು ಇಬ್ರಾಹಿಮನು ಕೇಳಿ, ಸ್ವಾಮಿಯವರನ್ನು ಕರೆ ಕಳುಹಿಸಿದನು. ಮಾಂಸಾಹಾರಿಯಾದ ಮ್ಲೇಂಛರ ಅರಮನೆಯಲ್ಲಿ ಪ್ರವೇಶಿಸುವದು ಅವರ ಮನಸ್ಸಿಗೆ ಬಾರದ್ದರಿಂದ, ಮೇಲೆ ಹೇಳಿದ ವಟವೃಕ್ಷದ ಕೆಳಗೆ ಕುಳಿತು, ಅಲ್ಲಿಂದಲೇ ಬಾದಶಹನ ಬೇನೆಯನ್ನು ಹೋಗಲಾಡಿಸಿದರು. ಕೆಲವು ದಿವಸಗಳನಂತರ ಬಾದಶಹನ ರೋಗವು ಪೂರಾ ಹೋಯಿತು. ಆದ್ದರಿಂದ ಅವನು ಕೃತಜ್ಞತೆಯಿಂದ ಸ್ವಾಮಿಗಳ ಪಾದುಕಗಳನ್ನು ಅಲ್ಲಿ ಸ್ಥಾಪಿಸಿ ಒಂದು ಗುಡಿಯನ್ನು ಕಟ್ಟಿಸಿದ್ದಲ್ಲದೆ ಆ ಮಹಾನುಭಾವರ ಹೆಸರು ನಿರಂತರವಾಗಿ ತನ್ನ ರಾಜ್ಯದಲ್ಲಿ ಉಳಿಯಬೇಕೆಂದು ಸರಕಾರೀ ಕಾಗದ ಪತ್ರಗಳ ಮೇಲ್ಭಾಗದಲ್ಲಿ "ಶ್ರೀ ಸರಸ್ವತೀ ಪ್ರಸನ್ನ" ಎಂದು ಬರೆಯಬೇಕೆಂದು ಕಟ್ಟು ಮಾಡಿದನು

ಪಾಪಕ್ಷಾಲನಕ್ಕಾಗಿ ಅವತರಿಸಿದ ಈ ವಿಭೂತಿಗೆ ಒಂದೇ ಕಡೆಯಲ್ಲಿ ನಿಲ್ಲುವದು ಪ್ರಶಸ್ತವೆನಿಸದ್ದರಿಂದ ಭಕ್ತರ ಸಂರಕ್ಷಣಾರ್ಥವಾಗಿ ಎರಡನೆಯ ಕಡೆಗೆ ಹೊರಟಿತು. ಹೋಗುವಾಗ "ಸ್ವಾಮಿಗಳ ಆಜ್ಞೆ ಏನು?" ಎಂದು ವಿಚಾರಿಸಲು "ಶ್ರೀದತ್ತನ ಪಾದುಕೆಗಳನ್ನು ಸ್ಥಾಪಿಸಿ ಅವುಗಳ ದರ್ಶನ



ಅಲ್ಲೀ ರೋಝಾ.

ವನ್ನು ನಿತ್ಯವಾಗಿ ತೆಗೆದುಕೊಳ್ಳುತ್ತ ಹೋಗು" ಎಂದು ಸ್ವಾಮಿಗಳು ಆಜ್ಞಾಪಿಸಿದರು. ಅದರಂತೆ ಬಾದಶಹನು ಆ ದೇವಾಲಯವನ್ನು ಕಟ್ಟಿ ದಿನಾಲು ದರ್ಶನ ತೆಗೆದುಕೊಳ್ಳುತಿದ್ದನಂತೆ.

ಈಗಲೂ ಎಷ್ಟೋ ಮುಸಲ್ಮಾನರು ಈ ದೇವಾಲಯಕ್ಕೆ ದರ್ಶನ ಕ್ಕೆಂದು ಬರುತ್ತಾರೆ; ಮತ್ತು ಹರಿಕೆಗಳನ್ನು ಬೇಡಿಕೊಳ್ಳುತ್ತಾರೆ. ಶ್ರೀ ಗುರು ಚರಿತ್ರೆಯಲ್ಲಿಯೂ ಮೇಲಿನ ಮಾದರಿಯ ಕಥೆಯೊಂದು ಇರು ತ್ತದೆ. ಆ ಅರಸನೇ ಇಬ್ರಾಹಿಮನೆಂದು ಕೆಲವರು ಪ್ರತಿಪಾದಿಸು ತ್ತಾರೆ ಈಗಾದರೂ ಪ್ರತಿ ಗುರುವಾರ ಭಕ್ತಮಂಡಲದವರು ಪಲ್ಲಕ್ಕಿಯ ಸೇವೆಯನ್ನು ಬಹು ಭಕ್ತಿಯಿಂದ ಜರಗಿಸುತ್ತಾರೆ.

## ೬. ಅಲ್ಲೀ ರೋಜಾ.

ಆರ್ಕ ಕೋಟೆಯ ಉತ್ತರಕ್ಕೆ ಒಂದು ಫರ್ಲಾಂಗದೊಳಗೆ ಈ ಇಮಾರತಿಯು ಇರುತ್ತದೆ. ಇದನ್ನು ಸಣ್ಣ ಅಲ್ಲೀ ಆದಿಲಶಹನು ೧೬೬೫ರಲ್ಲಿ ಕಟ್ಟಿಸಲಿಕ್ಕೆ ಪ್ರಾರಂಭಿಸಿದನು. ಈ ಇಮಾರತಿಯು ಪೂರ್ಣ ವಾಗಿದ್ದರೆ, ಶಿಲ್ಪ ಕಲೆಯ ಹೊಸ ಶೋಧವೇನಾದರೂ ನೋಡಲಿಕ್ಕೆ ಸಿಗುತಿತ್ತು. ಸಣ್ಣ ಅಲ್ಲಿ ಆದಿಲಶಹನು ಜಗದ್ಗುರುವಾದ ಸಣ್ಣ ಇಬ್ರಾ ಹಿಮನ ಮೊಮ್ಮಗನಾಗಿದ್ದನು. ತನ್ನ ಅಜ್ಜನು ಇಬ್ರಾಹಿಮ ರೋಜಾ ಕಟ್ಟಿಸಿರಲು, ತಂದೆಯು ಅದನ್ನು ಮೀರುವಂತೆ ಗೋಳಗುಮಟ ಕಟ್ಟಿಸಿರು ತ್ತಾನೆಂದು ತಿಳಿದು, ಇವೆಲ್ಲ ಕೆಲಸಗಳನ್ನು ಹಿಮ್ಮೆಟ್ಟುವಂತೆ ಅವನು ಈ ಇಮಾರತಿಯನ್ನು ಕಟ್ಟಿಸಲಿಕ್ಕೆ ಪ್ರಾರಂಭಿಸಿದನು. ಆದರೆ ಅಕಸ್ಮಾತ್ತಾಗಿ ಸತ್ತುಹೋದ್ದರಿಂದ ಇಮಾರತಿಯ ಕೆಲಸವು ಅಲ್ಲಿಯೇ ಉಳಿಯಿತು.

ಈ ಇಮಾರತಿಯು ನೆರಳಿನಿಂದ ಗೋಳಗುಮಟವು ಮುಚ್ಚಿ ಹೋಗಬೇಕೆಂದು ಇದನ್ನು ಕಟ್ಟಿಸುವವನ ಇಚ್ಛೆ ಇದ್ದಂತೆ ಕೆಲವರು ಹೇಳುತ್ತಾರೆ. ಆದರೆ ಕಟ್ಟುವಿಕೆಯ ಕಡೆಗೆ ಲಕ್ಷ್ಯಕೊಟ್ಟರೆ ಹಾಗೇನು ಕಾಣಿಸುವದಿಲ್ಲ.

ಈ ಇಮಾರತಿಯು ಉದ್ದಳತೆ ೨೦೦ ಅಡಿ ಅಗಲಳತೆ ೨೦೦ ಅಡಿ ಇರುತ್ತದೆ. ಮೇಲೆ ಕಾಣಿಸುವ ಕೆಲವು ಗೋರಿಗಳು, ನಿಜವಾದ ಗೋರಿಗಳಾಗಿರದೆ ಗೋಳಗುಮಟದಲ್ಲಿರುವಂತೆ ತೋರಿಕೆಯವು ಇರುತ್ತವೆ. ನಿಜವಾದ ಗೋರಿಗಳ ಕಡೆಗೆ ಹೋಗುವ ಮಾರ್ಗವು ಪೂರ್ವಕ್ಕೆ ಇದ್ದು ಅದು ಮುಚ್ಚಿರುತ್ತದೆ. ಇಮಾರತಿಯ ಕಟ್ಟುವಿಕೆಯನ್ನು ನೋಡಿ ದೊಡ್ಡ ದೊಡ್ಡ ಶಿಲ್ಪಿಗಳು ಬೆರಗಾಗಿರುತ್ತಾರೆ. ಕಟ್ಟಿ ೨೦೦ ವರ್ಷಗಳಾದರೂ ಏನೂ ನಾಶವಾಗದೆ ಉಳಿದಿರುತ್ತದೆ.

## ೭. ಅಂಡೇಮಸೀದೆ.

ಕೋಟೆಯ ದಕ್ಷಿಣದಿಕ್ಕಿಗೆ ಲಾಂಡಾಕಸಾಬ ತೋಫನ್ನು ನೋಡಲಿಕ್ಕೆ ಹೋಗುವಾಗ ಆರ್ಕಕೋಟೆಯನ್ನು ದಾಟುವಾಗಲೆ ಈ ಮಸೀದೆಯು ಹತ್ತುತ್ತದೆ. ಇದರ ಕಟ್ಟುವಿಕೆಯು ರಮಣೀಯವಾಗಿದ್ದು ಮುಖ್ಯ ಮಸೀದೆಯು ಎರಡನೇ ಅಂತಸ್ತಿನ ಮೇಲೆ ಇರುತ್ತದೆ.

ಇದೊಂದು ವಿಜಾಪುರ ಮಸೀದೆಯ ಹೊಸ ತರವು. ಎರಡನೇ ಇಬ್ರಾಹಿಮನ ಆಳಿಕೆಯಲ್ಲಿ ನಬಾಬ ಇಖತ್ಯಾರಖಾನನು ಇದನ್ನು ಕಟ್ಟಿಸಿದನೆಂದು ಇಲ್ಲಿಯ ಶಿಲಾಲೇಖದಿಂದಲೇ ತಿಳಿಯುತ್ತದೆ. ಈ ಮಸೀದೆಯ ಆಕಾರವು ಕೋಳಿಯ ತತ್ತಿಯಂತೆ ಇರುವದರಿಂದ ಹೀಗೆ ಹೆಸರು ಬಿದ್ದಿರಬಹುದೆಂದು ತೋರುತ್ತದೆ.

## ೮. ಅಲ್ಲಿಯ ದೊಡ್ಡ ಗೋರಿಯು.

ಅಂಡೇ ಮಸೀದೆಯಿಂದ ನೆಟ್ಟಗೆ ದಕ್ಷಿಣಕ್ಕೆ ಹೋಗುತ್ತಿರುವಾಗ, ಮಧ್ಯದಲ್ಲಿಯೇ ಒಂದು ಕೆಂಪು ಗರಸು ಹಾಕಿದ ಹಾದಿಯು ಪಶ್ಚಿಮಕ್ಕೆ ಹೋಗಿರುತ್ತದೆ. ಈ ಮಾರ್ಗದಿಂದ ಈ ಇಮಾರತಿಗೆ ಹೋಗಲಿಕ್ಕೆ ಬರುವಂತಿದೆ. ಆದಿಲಶಾಹಿಯ ಮೊದಲಿನ ಮೂವರು ನಾಲ್ವರು ಬಾದಶಹರನ್ನು ಅವರ ಇಚ್ಛೆಯಂತೆ ಹೈದರಾಬಾದದ ನಿಜಾಮ ಸರಕಾರದ ವಶದಲ್ಲಿರುವ ಗೋಗಿ ಎಂಬ ಗ್ರಾಮದಲ್ಲಿ ಯುಸೆಫಶಹನ

ಗುರುವಿನ ಗೋರಿಯು ಹತ್ತರವೇ ಹುಗಿಸಿದ್ದರು. ದೊಡ್ಡ ಅಲ್ಲಿಯು ನಿಜಾಮುಶಹನ ಅಳಿಯನೂ, ಸ್ನೇಹಿತನೂ ಆಗಿದ್ದನು. ಇವನೇ ವಿಜಯ ನಗರದ ರಾಜ್ಯವನ್ನು ಮುರಿದವನು. ಇತಿಹಾಸ ಪ್ರಸಿದ್ಧಳಾದ ಚಾಂದ ಬೀಬಿಯು ಇವನ ಪಟ್ಟದ ರಾಣಿಯು. ಇವಳ ಲಗ್ನಕಾಲದಲ್ಲಿ ವರೋಪಚಾರವೆಂದು ಇವನಿಗೆ ಸೊಲ್ಲಾಪೂರ ಮೊದಲಾದ ಕೆಲವು ಕೋಟೆಗಳು ಸಿಕ್ಕಿದ್ದವು. ಇವಲ್ಲದೆ ಕೆಲವು ಜನ ಗುಲಾಮರನ್ನು ಕಾಣಿಕೆಯಾಗಿ ಕೊಟ್ಟಿದ್ದರು.

ವಿಜಯನಗರದ ನಾಶವಾದನಂತರ ಚಾಂದಬೀಬಿಯು ಕೆಲವು ಕೋಟೆಗಳು ದೊರೆತದ್ದನ್ನು ನೋಡಿ ಈ ಆದಿಲಶಹನಿಗೆ ನಿಜಾಮು ಶಹನ ಸಹಾಯದ ಅವಶ್ಯಕತೆಯು ಬೇಡಾಯಿತು—ಪುನಃ ಜಗಳಗಳು ಎದ್ದವು. ಪರಿಣಾಮವೇನಾಯಿತೆಂದರೆ ನಿಜಾಮುಶಹನು ಒಪ್ಪಿಸಿದ ಗುಲಾಮ ರಲ್ಲಿ ಒಬ್ಬನು ಈ ಅಲ್ಲೀ ಆದಿಲಶಹನನ್ನು ಖಂಜೀರ ಚುಚ್ಚಿ ಕೊಂದು ಹಾಕಿದನು. ಒಮ್ಮೆಲೆ ಕೊಲ್ಲಲ್ಪಟ್ಟದ್ದರಿಂದ ಇಲ್ಲಿಯೇ ಹುಗಿದಿರುತ್ತಾರೆ. ಈ ಇಮಾರತಿಯು ಸಾಧಾರಣ ತರದ್ದು ಇರುತ್ತದೆ.

## ೯. ಹಸುರು ಕಲ್ಲಿನ ಗೋರಿಯು.

ಮೇಲೆ ಹೇಳಿದ ಇಮಾರತಿಯ ಪಟಾಂಗಣದಲ್ಲಿ ಹಸುರು ಕಲ್ಲಿನ ಗೋರಿಯು ಇದ್ದು ಶಿಲ್ಪಕಲೆಯ ಕೆಲಸವಾದರೂ ಚೆನ್ನಾಗಿರುತ್ತದೆ. ಈ ಗೋರಿಯು ಯಾರದೆಂಬ ತಿಳುವಳಿಕೆಯಾಗುವಂತೆ ಇಲ್ಲಾ. ಹೈದರಾಬಾದದ ನಿಜಾಮನ ಕಡೆಗೆ ಈ ಶಹರವು ಹೋದ ಕಾಲ ದಲ್ಲಿಯ ಒಬ್ಬ ಸುಭೇದಾರನ ಗೋರಿ ಎಂದು ಕೆಲವರೂ ಯಾವನೋ ಒಬ್ಬ ಸತ್ಪುರುಷನ ಗೋರಿಯೆಂದು ಕೆಲವರೂ ಹೇಳುತ್ತಾರೆ.

## ೧೦. ಲಾಂಡಾ ಕಸಾಬ ತೋಫು.

ಹಸುರು ಕಲ್ಲಿನ ಗೋರಿಯನ್ನು ನೋಡಿದನಂತರ ದೊಡ್ಡ ಮಾರ್ಗ ದಿಂದಲೇ ನೆಟ್ಟಗೆ ದಕ್ಷಿಣಕ್ಕೆ ಕೋಟೆಯ ಗೋಡೆಯ ಕಡೆಗೆ ಹೋಗ

ಬೇಕು. ಬಲಗಡೆ ತುಸು ಅಂತರದಲ್ಲಿಯೇ "ನಾಬತ" ಎಂಬ ಹೆಸರಿನ ಒಂದು ಬುರುಜು ಇರುತ್ತದೆ. ಈ ಬುರುಜಿನ ಮೇಲೆ ಈ ತೋಫನ್ನು ಇಟ್ಟಿರುತ್ತಾರೆ. ಬುರುಜಿನ ವರ್ಣನೆಯಲ್ಲಿ ಈ ಬುರುಜನ್ನು ಯಾಕೆ ಕಟ್ಟಿಸಿದರೆಂಬದನ್ನೂ ದೊಡ್ಡ ದೊಡ್ಡ ತೋಫಗಳನ್ನು ಯಾಕೆ ಇಟ್ಟಿರುತ್ತಾರೆಂಬದನ್ನೂ ಹೇಳಿರುತ್ತೇವೆ.

ಈ ತೋಫಿನ ರಚನೆಯನ್ನು ನೊಡಿದರೆ—ಇದು ಬಹು ದಿವಸಗಳ ಹಿಂದೆ ಮಾಡಿದ್ದಿರುವಂತೆ ತೋರುತ್ತದೆ. ಆದಿಲಶಾಹಿಯ ಕಾಲದಲ್ಲಿ ವಿಜಾಪುರದ ತೋಫುಗಳು ಪ್ರಸಿದ್ಧವಾಗಿದ್ದವು. ಅಹಮ್ಮದನಗರದಲ್ಲಿ ಎರಕು ಹೊಯ್ದು ತೋಫುಗಳನ್ನು ಮಾಡಲಿಕ್ಕೆ ಪ್ರಾರಂಭವಾದ ಬಳಿಕ ವಿಜಾಪುರದ ತೋಫುಗಳ ಪ್ರಸಿದ್ಧಿಯು ಕಡಿಮೆಯಾಗಿರಬೇಕೆಂದು ತೋರುತ್ತದೆ. ವಿಜಯನಗರದಿಂದ ತಂದ ತೋಫುಗಳನ್ನು ಇದೇ ಶಹರದ ಉಪ್ಪರ ಬುರುಜಿನ ಮೇಲೆ ಇಟ್ಟಿರುತ್ತಾರೆ. ಅವುಗಳ ರಚನೆಯೆಲ್ಲಾ ಈ ತೋಫುಗಳಂತೆಯೇ ಇರುತ್ತದೆ. ಈ ತೋಫುಗಳನ್ನು (ಲಾಂಡಾ ಕಸಾಬ ತೋಫ) ಯಾರು ಮಾಡಿಸಿದರೆಂಬದು ತಿಳಿಯುವದಿಲ್ಲ.

ಈ ತೋಫಿನ ಭಾರವು ೪೬ ಟನ್ ಇದ್ದು ಮುಲುಕರ ಮೈದಾನ ತೋಫಿಗಿಂತ ಬಹಳ ಜಡವಿರುತ್ತದೆ. ಇದರ ವ್ಯಾಸವು ೪॥ ಅಡಿ; ಉದ್ದಳತೆ ೨೧ ಅಡಿ. ಇದರ ಮುಖದ ಮೇಲೆ ಒಂದು ತೋಫಿನ ಗುಂಡು ತಾಕಿ ಹೋದಂತೆ ಕಾಣುತ್ತದೆ. ಅದು ಔರಂಗಜೇಬನ ತೋಫಿನ ಗುಂಡೇ ಇರಬಹುದು. ಈ ತೋಫಿನ ಹತ್ತರ ಇದೇ ಮಾದರಿಯ ಸಣ್ಣದೊಂದು ತೋಫು ಇರುತ್ತದೆ.

## ೧೧. ಜಂಜೀರಿ ಮಸೀದೆಯು.

ಲಾಂಡಾಕಸಾಬ ತೋಫನ್ನು ನೋಡಿಕೊಂಡು ಧರ್ಮಶಾಲೆಯ ಕಡೆಗೆ ತಿರುಗಿ ಬರುವಾಗ ಮಾರ್ಗದಲ್ಲಿ ಶ್ರೀ ದತ್ತದೇವಾಲಯದ

ಹತ್ತರ ಈ ಅಪ್ರತಿಮವಾದ ಸೂಕ್ಷ್ಮ ಕೆಲಸದ ಮಸೀದೆಯು ಹತ್ತುತ್ತದೆ. ಸಣ್ಣ ಇಬ್ರಾಹಿಮನಿಗೆ ಮುಲಕಾಜಹಾನೆಂಬ ಈಶ್ವರ ಭಕ್ತಪರಾಯಣಳಾದ ಮಗಳಿದ್ದಳು. ಇವಳ ಸಲುವಾಗಿಯೇ ಈ ಮಸೀದೆಯನ್ನೂ ಮತ್ತು ಕೋಟೆಯೊಳಗಿನ ಮಕ್ಕಾಮಸೀದೆಯನ್ನೂ ಕಟ್ಟಿಸಿದರೆಂದು ಹೇಳುತ್ತಾರೆ.

ಎಲ್ಲ ಇಮಾರತಿಗಳಂತೆ ಇದೂ ಮುದುಕಳಿಗೆ ಬಂದಿತ್ತು. ಆದರೆ ಮರಹೂಮ ಅಹಮ್ಮದೀ ಎಂಬವರೊಬ್ಬರು ಒಳ್ಳೆಯ ಸದ್ಗೃಹಸ್ಥರು ಇಲ್ಲಿ ಎಗ್ಝಿಕ್ಯೂಟಿವ್ಹ ಎಂಜಿನಿಯರಾಗಿ ಬಂದಾಗ ಲಾರ್ಡ ಕರ್ಝನ್ ಸಾಹೇಬರು ಇಲ್ಲಿಗೆ ಬಂದುದರಿಂದ ಈ ಇಮಾರತಿಯನ್ನು ಜೀರ್ಣೋದ್ಧಾರ ಮಾಡಿಸಿದ ಶ್ರೇಯವು ಇವರಿಬ್ಬರಿಗೆ ಸಲ್ಲುವದು.

ದೂರ ದೂರಿನ ಶಿಲ್ಪಾಕಲಾ ನಿಪುಣರನ್ನೇ ಕರೆಯಿಸಿ, ಬಿದ್ದ ಕಲ್ಲುಗಳ ಸೀಳುಗಳಲ್ಲಿ ಮೊದಲಿನಂತೆಯೇ ಕಲ್ಲುಗಳನ್ನು ಕೆತ್ತಿಸಿ, ಕೊರೆಯಿಸಿ, ಕೂಡ್ರಿಸಿರುವದರಿಂದ, ಇದು ಈಗ ಸುಶೋಭಿತವಾಗಿ ಕಾಣಿಸುತ್ತದೆ.

## ೧೨. ತಲೆಹೊಡೆಯುವಗಿಡವು (ಗೋರಖ ಹುಣಸೀಗಿಡ.)

ಆರ್ಕ ಕೋಟೆಯಿಂದ ತಾಜಬಾವಡಿಗೆ ಹೋಗುವ ಮಾರ್ಗದಲ್ಲಿ ಜೋಡಗುಮಟವು ಹತ್ತುವ ಪೂರ್ವದಲ್ಲಿಯೇ ಈ ಗಿಡವು ಇರುತ್ತದೆ. ಆದಿಲಶಾಹಿಯ ಆಳಿಕೆಯಲ್ಲಿ ಪರದೇಶದಿಂದ ತಂದ ಉತ್ತಮೋತ್ತಮ ವಸ್ತುಗಳಲ್ಲಿ ಈ ಗಿಡದ ಸಸಿಯು ಒಂದಾಗಿರುವದು.

ತಾರಾ ಎಂಬ ಇಂಗ್ರಜೀ ಕಾದಂಬರಿಯಲ್ಲಿ ಈ ಗಿಡದ ವರ್ಣನೆಯೂ, ಆ ಕಾಲದ ಶಿರಚ್ಛೇದಶಿಕ್ಷೆಯ ಭಯಂಕರವಾದ ಸ್ವರೂಪವೂ ಹೃದಯದ್ರಾವಕವಾಗಿ ವರ್ಣಿಸಲ್ಪಟ್ಟಿವೆ. ಆದಿಲಶಾಹಿಯ ಆಳಿಕೆಯಲ್ಲಿ ಈ ಗಿಡದ ಕೆಳಗೆ ಶಿರಚ್ಛೇದವಾಗುತಿದ್ದುದರಿಂದ ಇದಕ್ಕೆ "ತಲೆಹೊಡೆಯುವ ಗಿಡ" ಎಂಬ ಹೆಸರು ಬಿದ್ದದೆ ಈಗಾದರೂ ತಲೆಹೊಡೆದ ಮನುಷ್ಯನ

ಧಡವು ತಿನ್ನಲಿಕ್ಕೆ ಸಿಗುವದೆಂಬ ಆಶೆಯಿಂದ ಎಷ್ಟೋ ಹದ್ದುಗಳು ಈ ಗಿಡದ ಮೇಲೆ ಬಂದು ಕೂಡ್ರುತ್ತಿರುತ್ತವೆ.

ಈ ಗಿಡದ ಪರೀಘವು ೫೦ ಅಡಿ ಮೇಲಿದ್ದು ಇದಕ್ಕೂ ಹೆಚ್ಚಿಗೆ ಪರೀಘವುಳ್ಳ (೯೦ ಅಡಿ) ಮತ್ತೊಂದು ಇದರ ಸಮೀಪದಲ್ಲಿದ್ದ ಗಿಡವನ್ನು ಕಡಿದು ಬಿಟ್ಟಿರುತ್ತಾರೆ. ಈ ಗಿಡವು ಬಿದ್ದು ಕೊಳೆಯ ತೊಡಗಿದ್ದರಿಂದ ರೋಗವು ಹೆಚ್ಚಾಗುವ ಸಂಭವವಿರುವದೆಂದು ತಿಳಿದು ಹೀಗೆ ಮಾಡಬೇಕಾಯಿತು. ಒಂದು ಸಣ್ಣ ಟೊಂಗೆಯನ್ನು ಅಗಳಾಡಿಸಿದರೆ ಗಿಡವೆಲ್ಲ ಅಗಳಾಡುತ್ತದೆ. ಇದೇ ಗಿಡದ ವೈಲಕ್ಷಣವು ಕೋಡಿಗ ಕೆಮ್ಮಿಗೆ ಇದರ ಹಣ್ಣುಗಳನ್ನು ಉಪಯೋಗಿಸುತ್ತಾರೆ. ಈ ತರದ ಗಿಡಗಳು ಆಫ್ರಿಕಾ ಖಂಡದಲ್ಲಿ ಅನೇಕವಾಗಿದ್ದು ಪ್ರಸಿದ್ಧವಾದ ನೈಲ ನದಿಯ ಎರಡೂ ದಂಡೆಗಳು ಈ ಗಿಡಗಳಿಂದ ತುಂಬಿರುತ್ತವೆ.

## ೧೩. ಜೋಡು ಗುಮಟ.

ಮೇಲೆ ವಿವರಿಸಿದ ಗಿಡದಿಂದ ಮುಂದೆ ಸ್ವಲ್ಪ ಅಂತರದಲ್ಲಿಯೇ ಪಶ್ಚಿಮಕ್ಕೆ ಈ ಇಮಾರತಿಯು ಇರುವದು. ಈ ಗಿಡದ ಸಮೀಪಕ್ಕೆ ಬಂದು ತುಸು ಪಶ್ಚಿಮಕ್ಕೆ ನೋಡಿದರೆ ಈ ಇಮಾರತಿಯು ಕಾಣಿಸುತ್ತದೆ. ಯಾರು ಹೇಳುವ ಕಾರಣವೇ ಇಲ್ಲ. ಯಾಕಂದರೆ, ಹೆಸರೇ ಜೋಡು ಗುಮಟ! ಪಾಶ್ಚಿಮಾತ್ಯರು ಇದಕ್ಕೆ ಅಕ್ಕತಂಗಿಯಂದಿರು (two sisters) ಎನ್ನುತ್ತಾರೆ.

ಹಗೆಯು ಶರಣು ಬಂದಮೇಲೆ ಇಲ್ಲವೆ ಮರಣಹೊಂದಿದ ಮೇಲೆ ಆತನಿಗೆ ಯಾವ ತರದಿಂದಲೂ ನೋಯಿಸತಕ್ಕದ್ದಲ್ಲೆಂಬ ಸನಾತನ ಧರ್ಮದ ರೀತಿಯು, ಕ್ರೂರ ಸ್ವಭಾವದ ಔರಂಗಜೇಬನ ಹೃದಯಕ್ಕೆ ಕೆಲವಂಶದಿಂದ ನಟ್ಟಿತೆಂದು ಈ ಇಮಾರತಿಯಿಂದ ತಿಳಿದುಬರುತ್ತದೆ. ಮುಹಮ್ಮದಖಾನ ಮತ್ತು ಖವಾಸಖಾನರೆಂಬ ತಂದೆಮಕ್ಕಳು ಸಣ್ಣ ಅಲ್ಲಿ, ಮತ್ತು ಅವನ ಮಗನಾದ ಶಿಖಂದರರ ಕಾಲದಲ್ಲಿ ಮುಖ್ಯ ಮಂತ್ರಿ



ಆಂಡೇ ಮಸೀದೆ.

ಗಳಾಗಿದ್ದರು. ಮಹಮ್ಮದಖಾನನ ವಿಷಯವಾಗಿ ಅಗಸೆಯ ವರ್ಣನೆಯಲ್ಲಿ ಬರೆದಿರುತ್ತೇವೆ. ಖವಾಸಖಾನನು ಆದಿಲಶಾಹಿಯು ಮುರುಕಳಿಗೆ ಬಂದಾಗ ಮಂತ್ರಿಯಾಗಿದ್ದನು. ಇವನು ಔರಂಗಜೇಬನಿಗೆ ಕೂಡಿದನೆಂದು ಇವನ ಮೇಲೆ ಆರೋಪವನ್ನು ಹೊರಿಸಿ ತಂದೆಯಂತೆ ಈತನನ್ನು ಕೊಲ್ಲಿಸಿದನು.

ಮಹಮ್ಮದಖಾನನನ್ನು ಕೊಂದ ಸುದ್ದಿಯನ್ನು ಔರಂಗಜೇಬನು ರಾಜಪುತ್ರನಿದ್ದಾಗಲೇ ಕೇಳಿದ್ದನು. ಆದಿಲಶಾಹಿಯಿಂದ ಬರತಕ್ಕ ಹಣವನ್ನು ಈ ಮಹಮ್ಮದಖಾನನ ಗೋರಿಯ ವಿಷಯವಾಗಿ ವೆಚ್ಚಮಾಡಬೇಕೆಂದು ಅವನು ಹೇಳಿದ್ದನು. ಹಾಗೆ ಮಾಡದೆ ಒಂದು ಸಾಧಾರಣ ಗೋರಿಯನ್ನು ಕಟ್ಟಿಸಿದರು. ಔರಂಗಜೇಬನು ಇಲ್ಲಿಗೆ ಬಂದಾಗ ಈ ತಂದೆಮಕ್ಕಳನ್ನು ಹುಗಿದ ಸ್ಥಳದಲ್ಲಿ ಅತಿ ಸುಂದರವಾದ ಈ ಜೋಡುಗುಮಟದ ಇಮಾರತಿಯನ್ನು ಕಟ್ಟಿಸಿದನು.

ಮೊದಲನೆಯ ಇಮಾರತಿಯಲ್ಲಿ ಮಹಮ್ಮದಖಾನ, ಖವಾಸಖಾನರ ಗುರುವಿನ ಗೋರಿಯು ಇರುತ್ತದೆ. ಇಲ್ಲಿಯ ಮುಸಲ್ಮಾನರು ಇದಕ್ಕೆ ಬಹುಮಾನವನ್ನು ಕೊಡುತ್ತಾರೆ ಎರಡನೆಯ ಗುಮಟವಿದ್ದ ಇಮಾರತಿಯಲ್ಲಿ [ನೆಲಮನೆ] ಮಹಮ್ಮದ ಖವಾಸಖಾನರ ಗೋರಿಗಳೂ ಅವರ ಮನೆತನದ ಬೇರೆ ಜನರ ಗೋರಿಗಳೂ ಇರುತ್ತವೆ.

ಬೇರೆ ಕಡೆಗೆ ದೊಡ್ಡದೊಡ್ಡ ಮುಸಲ್ಮಾನ ಗೃಹಸ್ಥರ ನಿಜವಾದ ಮತ್ತು ತೋರಿಕೆಯ ಹೀಗೆ ಎರಡು ಪ್ರಕಾರದ ಗೋರಿಗಳು ಇರುವಂತೆ ಇಲ್ಲಿ ತೋರಿಕೆಯ ಗೋರಿಗಳು ಇರುವದಿಲ್ಲ.

## ೧೪. ತಾಜಬಾವಡಿ.

ಜೋಡುಗುಮಟದಿಂದ ಪಶ್ಚಿಮಕ್ಕೆ ೨೦೧ ಯಾರ್ಡ ಹೋದನಂತರ ಎತ್ತರವಾದ ಎರಡು ಗೋಪುರಗಳುಳ್ಳ ಒಂದು ಇಮಾರತಿಯು ಕಾಣಿಸುತ್ತದೆ. ಈ ಇಮಾರತಿಯು ಈ ತಾಜಬಾವಡಿಯ ಸುತ್ತಲಿದ್ದು ಈಗ ಅಲ್ಲಿ ಮುನಸಿಪಾಲಿಟಿಯ ಕಚೇರಿಯು ಇರುತ್ತದೆ.

ಆದಿಲಶಾಹಿಯ ಕಾಲದಲ್ಲಿ ಮಾಲಿಕ ಸಂದಲನೆಂಬ ಪ್ರಸಿದ್ಧ ಸರದಾರನು ಶಿಲ್ಪಕಲೆಯಲ್ಲಿ ನಿಪುಣನಿದ್ದನು. ಅವನೇ ಈ ಹೊಂಡದಂತಹ ದೊಡ್ಡ ಬಾವಿಯನ್ನು ಸಣ್ಣ ಇಬ್ರಾಹೀಮನ ಹೆಂಡತಿಯ ಸ್ಮಾರಕಕ್ಕಾಗಿ ಕಟ್ಟಿಸಿದನು. ವಿಜಾಪುರದ ಉತ್ತಮೋತ್ತಮ ಕೆಲಸಗಳನ್ನೆಲ್ಲ ಇವನೇ ಹೊರಡಿಸಿದನೆಂದು ಹೇಳುತ್ತಾರೆ. ಇಬ್ರಾಹೀಮ ರೋಜಾ ಎಂಬ ಇಮಾರತಿಯನ್ನು ಇವನೇ ಕಟ್ಟಿಸಿದನಂತೆ.

ವಿಜಾಪುರಕ್ಕೆ ನೀರಿನ ದುಷ್ಕಾಳವೆಷ್ಟಿತ್ತೆಂಬದು ಊರ ವರ್ಣನೆಯಲ್ಲಿ ಬಂದಿರುತ್ತದೆ. ಇದೊಂದೇ ಬಾವಿಯಿಂದ ಊರಿಗೆಲ್ಲ ನೀರಿನ ಪೂರೈಕೆಯಾಗಿರುತ್ತದೆ. ಈ ಬಾವಿಯನ್ನು ಕಟ್ಟಿಸಿದಂದಿನಿಂದ ೧೯೦೭ರ ವರೆಗೆ ಇದರ ತಳವನ್ನು ಯಾರೂ ಕಂಡಿದ್ದಿಲ್ಲ. ೧೯೦೭ರಿಂದ ೧೯೧೦ರ ವರೆಗೆ ಬಿದ್ದ ದುಷ್ಕಾಲದಲ್ಲಿ ತಳದ ಹೊಲಸನ್ನು ತೆಗೆಯುವಾಗ ಅಲ್ಲಿ ಅನೇಕ ಒಳ್ಳೇ ಮತ್ತು ಕೆಟ್ಟ ವಸ್ತುಗಳು ಸಿಕ್ಕವು ಅವುಗಳಲ್ಲಿ ವಿಜಯನಗರದ ರಾಮರಾಜನ ಕಲ್ಲಿನ ತಲೆಯೊಂದಾಗಿದೆ. ಈ ಶಿರವನ್ನು ಆದಿಲಶಾಯಿಯ ಕಾಲದಲ್ಲಿಯೂ ಮುಂದೆ ೧೮೦೦ರ ವರೆಗೆ ಆರ್ಕ ಕೋಟೆಯ ಅಗಸೆಯ ಮೇಲೆಯೂ ಇಟ್ಟಿದ್ದರು. ಮುಂದೆ ಸಾತಾರೆ ಅರಸರು ಈ ಶಿರವನ್ನು ನೋಡುವುದು ಅಯೋಗ್ಯ ಎಂದು ಭಾವಿಸಿ ಇದನ್ನು ಈ ಭಾವಿಯಲ್ಲಿ ಹಾಕಿಸಿದ್ದರು. ಈಗ ಈ ಶಿರವು ಗೋಳ ಗುಮಟದ ನಗಾರಖಾನೆಯಲ್ಲಿ ಇಡಲ್ಪಟ್ಟಿರುತ್ತದೆ.

ಈ ಬಾವಿಯು ೨೨೩ ಅಡಿ ಚಚೌಕಾಗಿರುತ್ತದೆ. ಸುತ್ತುಮುತ್ತಲಿನ ಪೌಳಿಗಳಲ್ಲಿ ಬೈರಾಗಿಗಳೂ ಪಾಂಥಸ್ಥರೂ ಇಳಿದುಕೊಳ್ಳುತ್ತಾರೆ.

## ೧೫. ಮಕ್ಕಾ ಅಗಸೆಯು.

ತಾಜಾ ಬಾವಡಿಯಿಂದ ಪಶ್ಚಿಮಕ್ಕೆ ೧೦೦ ಅಡಿ ಹೋದನಂತರ ಎದುರಿಗೆ ಒಂದು ದೊಡ್ಡ ಹಳೆಯ ಮನೆಯೂ ಅದರ ದಡ್ಡಿಯ ಬಾಗಿಲು ಹೆಬ್ಬಾಗಿಲುಗಳೂ ಕಾಣಿಸುತ್ತವೆ. ಇದೇ ಮಕ್ಕಾ ಅಗಸೆಯು. ಅಗಸೆ

ಗಳನ್ನು ವರ್ಣಿಸುವಾಗ ಇದರ ಐತಿಹಾಸಿಕ ವರ್ಣನೆಯನ್ನು ಸಂಕ್ಷೇಪವಾಗಿ ಕೊಟ್ಟಿರುತ್ತೇವೆ. ಇದರಲ್ಲಿ ಬೇರೆ ಭಾಗಗಳನ್ನು ಮಾಡಿ, ಈಗ ಇಲ್ಲಿ ಕನ್ನಡ ಸಾಲೆಯನ್ನು ಹಾಕುತ್ತಾರೆ. ಮೊದಲು ಇಲ್ಲಿ ಹೈಸ್ಕೂಲೂ ಅದಕ್ಕೂ ಪೂರ್ವದಲ್ಲಿ ಇಲ್ಲಿ ಮಾಮಲೇದಾರ ಕಚೇರಿಯೂ ಇದ್ದವು.

## ೧೬. ಮುಲುಖಮೈದಾನ ತೋಪು.

ಮಕ್ಕಾ ಅಗಸೆಯಿಂದ ಇರತಕ್ಕ ಕೋಟೆಯು ಸುತ್ತುವರಿದು ಹೋದ ಮಾರ್ಗದಿಂದ ಹೋದರೆ ಜೋರಾಪುರದ ಅಗಸೆ, ಕವಳೀ ಅಗಸೆಗಳು ಹತ್ತುತ್ತವೆ. ಅವುಗಳನ್ನು ದಾಟಿ ಮುಂದೆ ಹೋದರೆ ಯಾವ ಬುರುಜಿನ ಮೇಲೆ ಈ ತೋಪುವನ್ನು ಇಟ್ಟಿರುತ್ತಾರೋ ಆ ಬುರುಜು ಬರುವದು. ಇದಕ್ಕೆ ಈ ಹೆಸರು ಬೀಳುವ ಕಾರಣವೇನಂದರೆ, ಎರಡು ಸಿಂಹಗಳನ್ನು ಕೂಡಿದ ಒಂದು ಕಲ್ಲನ್ನು ಈ ಬುರುಜಿನ ಮೇಲೆ ಇಟ್ಟಿರುತ್ತಾರೆ. ಶರ್ಜ=ಸಿಂಹ.

ಈ ತೋಫನ್ನೂ ಇದರ ಜೊತೆಗೆ ಮತ್ತೊಂದನ್ನೂ ಕಾನಸ್ಟಾಂಟಿನೋಪಲದ ಒಬ್ಬ ಶಿಲ್ಪಜ್ಞನು ಅಹಮ್ಮದನಗರದ ನಿಜಾಮಶಾಹಿಯ ಬಾದಶಹನ ಸಲುವಾಗಿ ೧೫೪೯ರಲ್ಲಿ ಅಹಮ್ಮದನಗರದಲ್ಲಿ ಹೊಯ್ದನು. ಈ ತೋಪುಗಳನ್ನು ಎರಕು ಹೊಯ್ದ ಸ್ಥಳದಲ್ಲಿಯ ಸುಣ್ಣ ಗಚ್ಚುಗಳನ್ನೂ ಈಗಲೂ ನೋಡಬಹುದು. ನಿಜಾಮಶಾಹಿಯು ನಾಶವಾದನಂತರ ವರಾಂಡಗ ಕೋಟೆಯ ಮೇಲೆ ಈ ತೋಪುಗಳು ವಿಜಾಪುರದವರಿಗೆ ಸಿಕ್ಕವು. ಇವೆರಡೂ ತೋಪುಗಳನ್ನು ವಿಜಾಪುರಕ್ಕೆ ತರುವಾಗ ಮಹಾಕಾಳಿಯೆಂಬ ತೋಪು ಸರಿದಾಡಿ ಕೃಷ್ಣಾನದಿಯಲ್ಲಿ ಬಿದ್ದಿತು. ಅದನ್ನು ತೆಗೆಯುವದು ಅಶಕ್ಯವೆಂದು ಇನ್ನೊಂದನ್ನು ವಿಜಾಪುರಕ್ಕೆ ತಂದರು. ಬರುವಾಗ ಇದನ್ನು ಎಳೆಯಲಿಕ್ಕೆ ೧೪೦೦ ಎತ್ತುಗಳೂ ೧೦ ಆನೆಗಳೂ ಮತ್ತು ಅನೇಕ ಜನಗಳೂ ಉಪಯೋಗಿಸಲ್ಪಟ್ಟರು. ವರಾಂಡದ ಕೋಟೆಯಿಂದ ವಿಜಾಪುರಕ್ಕೆ ಇದನ್ನು ತರಲಿಕ್ಕೆ ಆರು ತಿಂಗಳ ಅವಧಿಯು ಬೇಕಾಯಿತು. ಇಂಗ್ಲೀಷ

ಸರಕಾರದ ವಶಕ್ಕೆ ಬಂದಾಗ ನಿರುಪಯೋಗ ವಸ್ತುಗಳ ಲಿಲಾವು ಮಾಡಿದರು. ಆಗ ಆ ತೋಫನ್ನು ೧೫೦ ರೂಪಾಯಿಗೆ ಮಾತ್ರ ಮಾರಿದರೆಂದು ತಿಳಿಯುತ್ತದೆ. ಆದರೆ ಲಾಟ ಸಾಹೇಬರು ಇಷ್ಟು ಸ್ವಲ್ಪ ಬೆಲೆಗೆ ಮಾರಬಾರದೆಂದು ಹೇಳಿದ್ದರಿಂದ ಈಗ ಎಲ್ಲರಿಗೂ ನೋಡಲು ದೊರೆಯುತ್ತದೆ ಇಲ್ಲದಿದ್ದರೆ ಇದನ್ನು ಕರಗಿಸಿ ಅನೇಕ ತರದ ವಸ್ತುಗಳನ್ನು ಆಗಲೇ ಮಾಡಿಬಿಡುತಿದ್ದರು. ಮುಂದೆ ಇದನ್ನು ವಸ್ತುಸಂಗ್ರಹಾಲಯದಲ್ಲಿಡಬೇಕೆಂದೂ ಇದನ್ನು ತರಿಸಲಿಕ್ಕೆ ೪.ಲಕ್ಷ ರೂಪಾಯಿಗಳು ಮಂಜೂರಾಗಿದ್ದವೆಂದೂ ಹೇಳುತ್ತಾರೆ. ಆದರೆ ಇದರ ಪ್ರಚಂಡ ಭಾರದಮೂಲಕ ಮತ್ತು ಇಷ್ಟೇ ಖರ್ಚಿನಲ್ಲಿ ಹೊಸದೊಂದು ತೋಫು ಸಿದ್ಧವಾಗುವದೆಂದು ತಿಳಿದ ಬಳಿಕ ಇದನ್ನು ಒಯ್ಯುವದನ್ನು ನಿಲ್ಲಿಸಿದರು.

೧೮೭೫-೭೬ರಲ್ಲಿಯೂ ಮೊನ್ನಿನ ರಾಜ್ಯಾರೋಹಣ ಕಾಲದಲ್ಲಿಯೂ ಸ್ವಲ್ಪ ಮದ್ದು ಹಾಕಿ ಇದನ್ನು ಹಾರಿಸುವ ಪ್ರಯತ್ನವನ್ನು ಮಾಡಿದರು. ಇದರಿಂದ ಹೊರಡುವ ಪ್ರಚಂಡವಾದ ಧ್ವನಿಯಿಂದ ಕೊಳ್ಳಿ ಹಚ್ಚುವವನಿಗೆ ಆಘಾತದ ತ್ರಾಸವಾಗದಂತೆ ಈ ಬುರುಜಿನ ಮೇಲೆ ಒಂದು ಬಾವಿಯು ಇರುತ್ತದೆ. ಕೊಳ್ಳಿ ಹಚ್ಚಿದವನು ಅದರಲ್ಲಿ ಹಾರಿಕೊಳ್ಳುತ್ತಾನೆ. ಆದರೆ ೧೮೭೫ರಲ್ಲಿ ನೀರಿನ ದುಷ್ಕಾಳದಲ್ಲಿ ಈ ಬಾವಿಯು ನೀರು ಅಟ್ಟಿಸಿಹೋದದರಿಂದ ಕೊಳ್ಳಿ ಹಚ್ಚಿದವನು ಇದರಲ್ಲಿ ಹಾರಿದರೂ ಮರಣಹೊಂದಿದನು. ಇದಲ್ಲದೆ ದೂರಿನ ಅರಣ್ಯದಲ್ಲಿ ಮೇಯುತ್ತಿರುವ ದನಕರುಗಳು ನಾಶವಾದವು. ಮತ್ತು ಊರೊಳಗಿನ ಗರ್ಭವತಿ ಸ್ತ್ರೀಯರ ಗರ್ಭಪಾತವಾಯಿತು. ೧೯೧೧ರಲ್ಲಿ ತೀರ ಸ್ವಲ್ಪ ಮದ್ದು ಹಾಕಿ ಹಾರಿಸಿದರೂ, ಎಷ್ಟೋ ಕಿಡಕಿಗಳೂ ಕನ್ನಡಿಗಳೂ ಒಡೆದುಹೋದವು.

ಈ ತೋಫಿನ ಭಾರವು ೬೨ ಟನ್ ಇದ್ದು ಉದ್ದಳತೆ ೧೪ ಅಡಿ ಇರುತ್ತದೆ. ಬಾಯಿಯ ವ್ಯಾಸವು ೧೨ ಅಡಿ ಇದ್ದು ಒಳಗಿನ ವ್ಯಾಸವು ೨॥ ಅಡಿ ಇರುತ್ತದೆ. ಇದರ ಆಳವು ೧೨ ಅಡಿ ಇರುತ್ತದೆ. ಇದು ಮೊದಲು ಬುರುಜಿನ ಶಿಖರದ ಮೇಲೆ ಇಡಲ್ಪಟ್ಟಿತ್ತು; ಮತ್ತು ಬೇಕಾದ

ಕಡೆಗೆ ತಿರಿಗಿಸಲಿಕ್ಕೆ ಬರುವಂತೆ ವ್ಯವಸ್ಥೆಯು ಮಾಡಲ್ಪಟ್ಟಿತ್ತು. ಈ ವ್ಯವಸ್ಥೆಯು ತನಗೆ ವಿರೋಧವಾಗಬಹುದೆಂದು ಬೆದರಿ ಔರಂಗಜೇಬನು ಈ ಸ್ಥಳದಲ್ಲಿ ತಂದಿಟ್ಟಿರುತ್ತಾನೆ. ಇದರ ಮೇಲೆ ಔರಂಗಜೇಬನ ಮತ್ತು ಈ ತೋಫನ್ನು ಎರಕಹೊಯ್ದವನ ಲೇಖಗಳು ಇರುತ್ತವೆ. ಅದರಲ್ಲಿ ಔರಂಗಜೇಬನು ಈ ತೋಫನ್ನು ಎಂದು ಗೆದ್ದನೆಂಬ ಮತ್ತು ಆ ಶಿಲ್ಪಜ್ಞನು ಇದನ್ನು ಎಂದು ಎರಕು ಹೊಯ್ದನೆಂಬ ಉಲ್ಲೇಖ ಉಂಟು.

## ೨೩. ಉಪ್ಪರ ಬುರುಜ.

ಮುಲಖ ಮೈದಾನ ತೋಫನ್ನು ಇಟ್ಟ ಬುರುಜಿನಿಂದ ಪೂರ್ವಕ್ಕೆ ನೋಡಿದರೆ, ಸಮೀಪದಲ್ಲಿಯೇ ಇದಕ್ಕೂ ಹತ್ತಿರದ ಒಂದು ಬುರುಜು ಕಾಣಿಸುತ್ತದೆ. ಅದೇ ಉಪಲಿ ಅಥವಾ ಉಪಲೀ ಬುರುಜು.

ಹೈದರಖಾನನೆಂಬ ದೊಡ್ಡ ಅಲ್ಲೀ ಆದಿಲಶಹನ ಸರದಾರನು ವಿಜಯನಗರದ ಗೆದ್ದ ರಾಜ್ಯದ ವ್ಯವಸ್ಥೆಯಲ್ಲಿ ತೊಡಗಿದ್ದನು. ಶಹರದ ಕೋಟೆಯನ್ನು ಕಟ್ಟಿಸುವ ಕೆಲಸದಲ್ಲಿ ಅವನಿಗೆ ಯಾವ ಭಾಗವು ದೊರೆಯದಿದ್ದದನ್ನು ಕಂಡು ಬಾದಶಹನು "ತುಮ್ ಸಬ್ಬಸೆ ಉಪ್ಪರ ಬಂದೊ" ಎಂದು ಆಜ್ಞೆಕೊಟ್ಟ ಮೇರೆಗೆ ಅವನು ಇದೊಂದು ಸ್ವತಂತ್ರ ಬುರುಜನ್ನು ಕಟ್ಟಿಸಿರುತ್ತಾನೆ. ಎತ್ತರವಾದ ಸ್ಥಳದಲ್ಲಿರುವದರಿಂದ ಸುತ್ತಲಿನ ಪ್ರದೇಶವನ್ನೆಲ್ಲ ನೋಡಬಹುದಾಗಿದೆ. ಇದರ ಮೇಲಿಂದ ಇದು ಕಾವಲು ಮಾಡುವದಕ್ಕೆ ಇರಬಹುದೆಂದು ತೋರುತ್ತದೆ. ಇದರ ಮೇಲೆ ಎರಡು ತೋಫುಗಳಿದ್ದು ಅವುಗಳಲ್ಲಿ ಉದ್ದವಾದ ತೋಫಿನ ಹೆಸರು "ಲಾಂಬಚರಿ" ಎಂದಿರುತ್ತದೆ. ಇದು ೩೦ ಫೂಟು ಉದ್ದವಾಗಿದೆ. ಈ ತೋಫುಗಳು ವಿಜಯನಗರದ ಹಾವಳಿಯ ಕಾಲದಲ್ಲಿ ಸಿಕ್ಕವು.

## ೨೪. ಚಂದಾಬಾವಡಿ.

ಉಪ್ಪರ ಬುರುಜಿನಿಂದ ನೆಟ್ಟಗೆ ಉತ್ತರಕ್ಕೆ ಹೋದರೆ ಈ ಬಾವಿಯು ಹತ್ತುತ್ತದೆ. ಇದರಲ್ಲಿ ವಿಶೇಷವೇನೂ ನೋಡತಕ್ಕದ್ದಿರುವದಿಲ್ಲ.

ಗನೇಯ ಅಲ್ಲಿಯು ತನ್ನ ಹೆಂಡತಿ ಚಾಂದಬೀಬಿಯ ಸ್ಮರಣಾರ್ಥವಾಗಿ ಈ ಬಾವಿಯನ್ನು ಕಟ್ಟಿಸಿದನು. ಆ ಕಾಲದಲ್ಲಿ ಈ ಭಾಗದಲ್ಲಿ ಬೇರೊಂದು ಊರು ಇತ್ತೆಂದು ಹೇಳುತ್ತಾರೆ.

## ೪ನೆಯ ಪ್ರಕರಣ.

## ಕಿಲ್ಲೆಯ ಹೊರಗಿನ ಕಟ್ಟಡಗಳು.

### ೨೫. ಇಬ್ರಾಹಿಮು ರೋಝಾ.

ಯಾವ ಕಟ್ಟಡದ ವಿಷಯುವಾಗಿ ನಮ್ಮ ಈಗಿನ ಪುಸ್ತಕವಂತಹ ಅನೇಕ ಪುಸ್ತಕಗಳನ್ನು ಬರೆಯುಬಹುದೋ ಆ ಇಬ್ರಾಹಿಮು ರೋಝಾ ಎಂಬ ಪ್ರಖ್ಯಾತವಾದ ಕಟ್ಟಡವು ನಗರವನ್ನು ಸುತ್ತಿರುವ ಕೋಟೆಯ ಪಶ್ಚಿಮಕ್ಕೆ ಅರ್ಧ ಮೈಲಿನ ಮೇಲೆ ಜೋರಾಪುರವೆಂಬ ಶಾಖಾನಗರವನ್ನು ದಾಟಿದ ಮೇಲೆ ಹತ್ತುತ್ತದೆ. ಪಶ್ಚಿಮದಿಕ್ಕಿನ ಶಹರವು ದಿಬ್ಬದ ಮೇಲೆ ಇರುವದರಿಂದಲೂ ಈ ಕಟ್ಟಡವು ತಗ್ಗು ನೆಲದಲ್ಲಿ ಇರುವದರಿಂದಲೂ ದೂರಿನಿಂದ ನೋಡುವವರಿಗೆ ಈ ಕಟ್ಟಡವು ಎದ್ದು ಕಾಣಿಸುವದಿಲ್ಲ. ಆದಿಲಶಾಹಿಯ ಕಾಲದಲ್ಲಿಯೂ ಉಗೆಬಂಡಿ ಬರುವದಕ್ಕೆ ಮುಂಚೆಯೂ ನಗರಪ್ರವೇಶ ಮಾರ್ಗವು ಇಬ್ರಾಹಿಮು ರೋಝಾದ ಬದಿಯಿಂದಲೇ ಹೋಗುತಿತ್ತು. ಇಬ್ರಾಹಿಮು ರೋಝಾದ ಹತ್ತರದಲ್ಲಿಯೇ ತೊರವೆ (ನವರಸಪುರ) ಎಂಬ ಶಾಖಾನಗರಕ್ಕೆ ವಿಜಾಪುರದಿಂದ ಒಂದು ರಾಜಮಾರ್ಗವು ಹೋಗಿರುತ್ತದೆ. ಈ ರಾಜಮಾರ್ಗದ ಇಬ್ಬದಿಗೂ ಆದಿಲಶಾಹಿಯ ಕಾಲದಲ್ಲಿ ದೊಡ್ಡ ಸಂತೆಯು ಕೂಡುತಿತ್ತು. ಇನ್ನೂ ಈ ಮಾರ್ಗದ ಬದಿಗೆ ಬಿದ್ದ ಅಂಗಡಿಗಳ ಕುರುಹುಗಳು ಕಾಣಿಸುತ್ತವೆ. ಆ ಕಾಲದ ಒಬ್ಬ ಪ್ರವಾಸಿಯು ನಗರವನ್ನು ಪ್ರವೇಶಿಸುವಾಗ ೧೮ ಲಕ್ಷ ಜನಸಂಖ್ಯೆಯುಳ್ಳ ಈ ನಗರದ ರಾಜಮಾರ್ಗದ ಸಂತೆಯುನ್ನೂ

ಇಬ್ರಾಹಿಮ ರೋಝಾ ಕಟ್ಟಡವನ್ನೂ ಯಾವಾಗಲೂ ನೀರಿನಿಂದ ತುಂಬಿ ತುಳುಕುವ ರಾಮುಟಂಕಾ ಮತ್ತು ಮಹಮ್ಮದ ಸರೋವರಗಳನ್ನೂ ಫಲಭರಿತ ವೃಕ್ಷಗಳಿಂದ ತುಂಬಿದ ಹೂದೋಟವನ್ನೂ ನೋಡಿ, ಇದೇನು, ನಂದನವನವೋ ಏನೋ ಎಂದು ಭ್ರಮುಗೊಂಡು ಆಶ್ಚರ್ಯಪಡುತಿದ್ದನು. ಈಗಾದರೂ ನಮ್ಮ ಮಾರವಾಡಿ ಸರಕಾರವು ಮೊದಲಿನಂತೆ ಈ ಪಟ್ಟಣವನ್ನು ಸುಶೋಭಿತವಾಗಿ ಮಾಡಲೆಣಿಸುತ್ತಾರಂತೆ. ನಂದೋರಾಜಾಭವಿಷ್ಯತಿ !!

ಇಬ್ರಾಹಿಮರೋಝಾ ಕಟ್ಟಡದ ಸುತ್ತಲು ದಟ್ಟಾದ ಗಿಡಗುಂಪು ಇರುವದರಿಂದ ಅಲ್ಲಿಯ ಹವೆಯು ತಂಪಾಗಿರುತ್ತದೆ. ಇದು ಜಿಲ್ಲೆಯ ಸ್ಥಳವಾದ ಕೂಡಲೇ ಯುರೋಪಿಯನರಿಗೆ ಇಳಿಯುವದಕ್ಕಾಗಿ ಈ ಕಟ್ಟಡ ವನ್ನು ಕೊಂಡತೊಡಗಿದರು. ಗವರ್ನರ ಸಾಹೇಬರು ಬಂದರೂ ಅವರ ವ್ಯವಸ್ಥೆಯು ಇಲ್ಲಿಯೇ ಆಗುತಿತ್ತು. ಆದಿಲಶಾಹಿಯ ಕಾಲದಲ್ಲಿ ಈ ಕಟ್ಟಡದ ಸುತ್ತಲೂ ಹೂದೋಟವಿತ್ತು. ಈಗಲೂ ಎಷ್ಟೋ ಗಿಡಗಳ ಮಡಿಗಳು ದೃಷ್ಟಿಗೆ ಬೀಳುತ್ತವೆ. ಈ ಕಟ್ಟಡವು ಎರಡು ಕಟ್ಟಡಗಳಿಂದ ಕೂಡಿ ಆಗಿರುತ್ತದೆ, ಪೂರ್ವದಿಕ್ಕಿಗಿರುವ ಕಟ್ಟಡದಲ್ಲಿ ಗೋರಿಗಳಿರುತ್ತವೆ. ಪಶ್ಚಿಮಕ್ಕಿರುವ ಕಟ್ಟಡವು ಮಸೀದೆಯಿರುತ್ತದೆ. ದೊಡ್ಡದೊಡ್ಡವರ ಗೋರಿಗಳಿರುವ ಕಟ್ಟಡದ ಹತ್ತರ ಮಸೀದೆಯನ್ನು ಕಟ್ಟುವ ರೂಢಿಯು ಮುಸಲ್ಮಾನರಲ್ಲಿ ಕಂಡುಬರುತ್ತದೆ. ಕಟ್ಟಡದ ರಕ್ಷಕರಿಗೆ ನಿಯಮಿತ ವೇಳೆಗೆ ನಿಮಾಜಮಾಡಲಿಕ್ಕೆ ಅನುಕೂಲವಾಗಬೇಕೆಂಬುದೇ ಇದರ ಉದ್ದೇಶವು. ಗೋಲಗುಮಟದ ಹತ್ತರಿರುವ ಮಸೀದೆಯಲ್ಲಿಯೂ ಕಲಾಕೌಶಲ್ಯದ ಕೆಲಸವು ನೋಡತಕ್ಕದ್ದಾಗಿದೆ. ಆದರೆ ಪ್ರಚಂಡವಾದ ಕಟ್ಟಡವು ಹತ್ತರಿರುವದರಿಂದ ಅದರ ಕಡೆಗೆ ಯಾರೂ ಕಣ್ಣೆತ್ತಿ ಸಹ ನೋಡುವದಿಲ್ಲ. ಇಬ್ರಾಹಿಮ ರೋಝಾದಲ್ಲಿರುವ ಕಟ್ಟಡಗಳೆರಡೂ ಸಮೀಪವಾಗಿಯೂ ಸಮಾನವಾಗಿಯೂ ಇರುವದರಿಂದಲೂ ಮಧ್ಯದಲ್ಲಿ ಕಾರಂಜಿಯು ಇರುವದರಿಂದಲೂ ಒಂದರಿಂದ ಮತ್ತೊಂದಕ್ಕೆ ಶೋಭೆ ಬರುತ್ತದೆ.

ಇಬ್ರಾಹಿಮ ರೋಝೆಯು ದಕ್ಷಿಣದ ತಾಜಮಹಾಲವೇ ಸರಿ! ಸ್ವಲ್ಪ ದಿವಸಗಳಲ್ಲಿಯೇ ಇದರ ವ್ಯವಸ್ಥೆಯು (ಹೂದೋಟ ಮುಂತಾದವು) ಮೊದಲಿನಂತೆಯೇ ಆಗುವ ಲಕ್ಷಣವು ತೋರುತ್ತದೆ. ಐತಿಹಾಸಿಕ ದೃಷ್ಟಿಯಿಂದ ಇಬ್ರಾಹಿಮ ಜಗದ್ಗುರು ಎಂಬವನು ತಾಜಸುಲ್ತಾನಾ ಎಂಬ ತನ್ನ ಹೆಂಡತಿಯ ಸಲುವಾಗಿ ಮಲಿಕ ಸಂದಲನೆಂಬ ಶಿಲ್ಪಿಯಿಂದ ಇದನ್ನು ಕಟ್ಟಿಸಿದನು. ಹೆಂಡತಿಗಿಂತ ಇವನೇ ಮೊದಲು ಸತ್ತದ್ದರಿಂದ ಇವನನ್ನೇ ಮೊದಲು ಹುಗಿದಿರುತ್ತಾರೆ. ಇವನ ಹೆಂಡತಿಯ ಗೋರಿಯೂ ಇವನ ಹತ್ತರ ಇದೆ. ವಿಜಾಪುರದ ಕಟ್ಟಡಗಳಲ್ಲಿ ಪ್ರಸಿದ್ಧವಾದ ಕಲಾ ಕೌಶಲ್ಯದ ಕೆಲಸವೆಲ್ಲ ಈ ಶಿಲ್ಪಿಗನದೇ ಇರುತ್ತದೆ. ಗೋರಿಗಳಿರುವ ಕಟ್ಟಡದಲ್ಲಿ ಒಟ್ಟಿಗೆ ೬ ಗೋರಿಗಳಿದ್ದು, ಪೂರ್ವದಿಂದ ಪಶ್ಚಿಮಕ್ಕೆ ಕೆಳಗೆ ಬರೆದಂತೆ ಇರುತ್ತವೆ. ೧ ತಾಜಸುಲ್ತಾನಾ (ಇಬ್ರಾಹಿಮನ ಹೆಂಡತಿ). ೨ ಇಬ್ರಾಹಿಮನ ತಾಯಿ. ೩ ಇಬ್ರಾಹಿಮನು. ರೋಝಾಸುಲ್ತಾನಾ (ಮಗಳು). ೫ ದರವೇಶಿ ಪಾಚ್ಛಾ (ಮಗ). ೬ ಸುಲೇಮಾನ (ಮಗ).

ಗೋರಿಯಿರುವ ಕಟ್ಟಡದ ಹೊರಮಗ್ಗಲಿಗೆ ತುಂಬಾ ಕುರಾನದ ವಾಕ್ಯಗಳನ್ನು ಬರೆದಿರುತ್ತಾರೆ. ನಾಲ್ಕು ಗೋಡೆಗಳ ನಡುವಿನ ಬಾಗಿನಲ್ಲಿ ಹಿಂದಿನಿಂದ ಮೇಲೆ ಏರಿಹೋಗಲು ದಾರಿಯನ್ನು ಮಾಡಿರುತ್ತಾರೆ. ಕಟ್ಟಡದ ಮೇಲೆ ನೋಡತಕ್ಕಂತಹುದು ಏನೂ ಇಲ್ಲ. ಕಟ್ಟಡದಲ್ಲಿರುವ ನಕ್ಷೆಯ ಕೆಲಸವು ಬಹಳ ಮೋಹಕವಾಗಿರುವದರಿಂದ ಎಷ್ಟು ನೋಡಿ ದರೂ ತೃಪ್ತಿಯಾಗುವಂತಿಲ್ಲ. ಗೋರಿಯಿರುವ ಕಟ್ಟಡದ ಗೋಡೆಯ ಮೇಲಿನ ಲಿಪಿಯ ಕೆಲಸವನ್ನು ನೋಡಿ ಅಗಾಧಪಟ್ಟು ಅತ್ತಿತ್ತ ದೃಷ್ಟಿ ಚೆಲ್ಲುತ್ತ ನಿಂತಾಗ ಮಸೀದೆಯ ಕಟ್ಟಡದ ಕೆಲಸವು ದೃಷ್ಟಿಗೆ ಬಿದ್ದು ನೋಡುವವನನ್ನು ಮತ್ತಷ್ಟು ಆಶ್ಚರ್ಯಗೊಳಿಸುತ್ತದೆ. ಸುತ್ತಲಿರುವ ನಾಗೊಂದಿಗೆಗಳಲ್ಲಿ ದೃಷ್ಟಿಯಿಟ್ಟರೆ, ನಮ್ಮೆದುರಿಗೆ ಕಮಲದ ಗುಚ್ಛಗಳು ಇರುವವೋ ಏನೋ ಎಂಬ ಭಾಸವಾಗುತ್ತದೆ. ಮಸೀದೆಯ ಕಟ್ಟಡದ ಕಡೆಗೆ ದೃಷ್ಟಿಯನ್ನು ಚೆಲ್ಲಿದರೆ ಗೋಡೆಯೆಲ್ಲ ತಾವರೆಯ ಸಿವಡು



ବାରା ଖାଂବି.

ಗಳನ್ನು ಅಲ್ಲಲ್ಲಿ ಇಟ್ಟಂತೆ ತೋರುತ್ತದೆ. ಎಂತಹ ಚಂಚಲವೃತ್ತಿಯ ಮನುಷ್ಯನನ್ನಾದರೂ ಅಲ್ಲಿ ಬಿಟ್ಟರೆ ಅವನು ಕೆಲಹೊತ್ತು ಸ್ತಬ್ಧನಾಗಿ ನಿಲ್ಲಬಹುದು. ರಸಿಕಜನರು ಅದನ್ನು ಎಂಟೆಂಟು ದಿವಸ ಬಿಟ್ಟುಬಿಡದೆ ನೋಡುವದೇನೂ ಆಶ್ಚರ್ಯವಲ್ಲ.

ಜಗದ್ಗುರುವು ತನ್ನ ಆಳಿಕೆಯಲ್ಲಿ ಹಿಂದೂ ಜನರನ್ನು ವಿಶೇಷವಾಗಿ ಮನ್ನಿಸಿದ್ದರಿಂದಲೂ, ಸರಕಾರಿ ಕಾಗದಪತ್ರಗಳಲ್ಲಿ ಪ್ರಾರಂಭಕ್ಕೆ "ಶ್ರೀ ಸರಸ್ವತಿ ಪ್ರಸನ್ನ" ಎಂದು ಬರೆಯುವ ರೂಢಿಯನ್ನಿಟ್ಟುದರಿಂದಲೂ, ಈ ಕಟ್ಟಡವನ್ನು ನೋಡುವವರಲ್ಲಿ ಅವರ ವಿಷಯವಾಗಿ ಆದರವು ಉತ್ಪನ್ನ ವಾಗುವದು ಸ್ವಾಭಾವಿಕವಾಗಿದೆ.

## ೨೬. ಮುತ್ತಿನ ಗುಮಟವು.

"ಇಬ್ರಾಹೀಮ ರೋಝಾ" ಎಂಬ ಇಮಾರತಿಗೆ ಬಂದ ದಾರಿಯಿಂದಲೇ ಮುಂದೆ ಹೋದರೆ ಈ ಗುಮಟವು ಹತ್ತುತ್ತದೆ. ಇದಕ್ಕೆ ಹೊರಗಿನ ಕಲ್ಲಿಗೆ ಸುಣ್ಣವನ್ನು ಹಚ್ಚಿರುವದರಿಂದಲೂ, ಇದರ ಸಮೀಪಕ್ಕೆ ಇತರ ಇಮಾರತಿಗಳು ಇಲ್ಲದಿರುವದರಿಂದಲೂ ಇದನ್ನು ನೋಡಲಿಕ್ಕೆ ತೊಂದರೆಯೆನಿಸುವದಿಲ್ಲ. ಗುಮಟವು ಸಾಧಾರಣ ತರದ್ದು ಇದ್ದು, ಒಳಗೆ ಸಿಂಪಿನ ಸುಣ್ಣದಿಂದ ಬಣ್ಣ ಕೊಟ್ಟಿರುವದರಿಂದ ಇದಕ್ಕೆ ಈ ಹೆಸರು ಬಿದ್ದಿರುತ್ತದೆ.

ಯಾವನೋ ಒಬ್ಬ ಸತ್ಪುರುಷನಿಗೆ ಅನೇಕ ಮುತ್ತುಗಳನ್ನು ಕಾಣಿಕೆ ಯಾಗಿ ಕೊಟ್ಟಿದ್ದರಂತೆ. ಅವನು ಈ ಇಮಾರತಿಗಾಗಿ ಗಚ್ಚು ಸಿದ್ಧ ಮಾಡುತ್ತಿರುವಾಗ ಅವನ್ನು ಅಲ್ಲಿ ಚಲ್ಲಿಕೊಟ್ಟದರಿಂದ, ಅದಕ್ಕೆ ಚನ್ನಾಗಿ ಬಣ್ಣವು ಬಂದಿತೆಂದೂ ಹೇಳುತ್ತಾರೆ.

## ೨೭. ಅಫಝುಲ್ಲಖಾನನ ಹೆಂಡರ ಗೋರಿಗಳು.

ಮುತ್ತಿನ ಗುಮಟದಿಂದ ತುಸು ಉತ್ತರಕ್ಕೆ ಹೋದ ಮೇಲೆ ಪೂರ್ವ ಪಶ್ಚಿಮದ ಒಂದು ಮಾರ್ಗವು ಹತ್ತುತ್ತದೆ. ಈ ಮಾರ್ಗದಿಂದ

ಪಶ್ಚಿಮಕ್ಕೆ ಒಂದು ಮೈಲು ದಾರಿಯನ್ನು ಹೋದ ಮೇಲೆ ಹಾದಿಗೆ ಹೊಂದಿಯೇ ತುಸು ಅಂತರದಲ್ಲಿರುವ ಗಿಡಗಳ ಗುಂಪಿನಲ್ಲಿ ಈ ಗೋರಿಗಳು ಇರುತ್ತವೆ. ಅಫಝುಲ್ಲಖಾನನು ಶಿವಾಜಿಯ ಮೇಲೆ ದಂಡೆತ್ತಿ ಹೊರಟಾಗ ಮುಂದಿನ ಎಲ್ಲ ವ್ಯವಸ್ಥೆಯನ್ನು ಮಾಡಿಕೊಂಡು ಹೋಗಬೇಕೆಂದು ಅವನ ಜ್ಯೋತಿಷಿಯು ಅವನಿಗೆ ಹೇಳಿದನಂತೆ. ಅನಂತರ ಅವನು ತನ್ನ ಹೆಂಡಂದಿರನ್ನು ಒಬ್ಬರ ಹಿಂದೊಬ್ಬರನ್ನು ಕರೆದು ಅಲ್ಲಿಯೇ ಇರುವ ಒಂದು ಬಾವಿಯಲ್ಲಿ ಹಾಕಿ ಜೀವ ಹೋದ ಮೇಲೆ ಅಲ್ಲಿಯೇ ಹುಗಿಸಿದನೆಂದು ಹೇಳುತ್ತಾರೆ. ಈತನಿಗೆ ೬೩ ಹೆಂಡರಿದ್ದರು. ಒಬ್ಬಳಿಗೆ ಮಾತ್ರ ಇವನ ಕರೆಯುವುದರಲ್ಲಿ ಸಂಶಯವು ತಟ್ಟಿ ಓಡಿಹೋದ್ದರಿಂದ ಇವಳ ಗೋರಿಯು ಮಾತ್ರ ಬೇರೆದಾಗಿರುತ್ತದೆಂದು ಹೇಳುತ್ತಾರೆ.

## ೨೮. ಜಹಾ ಬೇಗಮ್ಮನ ಗೋರಿಯು.

ಶಹರದ ಸಾಮಾನ್ಯ ವರ್ಣನೆಯಲ್ಲಿ ಈ ಗೋರಿಯು ಎಲ್ಲಿರುತ್ತದೆಂಬದನ್ನು ಹೇಳಿರುತ್ತೇನೆ. ಮುಹಮ್ಮದಶಹನಿಗೆ ಜಹಾ ಬೇಗಮ್ಮಳೆಂಬ ಒಬ್ಬ ಮಗಳಿದ್ದಳು. ಅವಳು ತನ್ನ ಗೋರಿಗಾಗಿಯೂ ಗೋಳಗುಮಟದಂಥ ಇಮಾರತಿಯು ಇರಬೇಕೆಂದು ಹಟವನ್ನು ಹಿಡಿದುದರಿಂದ ಗೋಳಗುಮಟದ ಅಳತೆಗನುಸರಿಸಿ ಈ ಇಮಾರತಿಯನ್ನೂ ಕಟ್ಟುವ ಕೆಲಸವು ಪ್ರಾರಂಭವಾಯಿತು. ಆದರೆ ಇದರ ತಳಗಟ್ಟು ಮುಗಿಯುವಷ್ಟರಲ್ಲಿಯೇ ಮುಹಮ್ಮದಶಹನು ತೀರಿಕೊಂಡದ್ದರಿಂದ ಕಟ್ಟುವ ಕೆಲಸವು ನಿಂತು ಹೋಯಿತು.

## ೨೯. ಐನ ಉಲ್ಮುಲುಕನ ಗೋರಿಯು.

ಸ್ಟೇಶನ್ನದಿಂದ ಎರಡು ಮೈಲು ಪೂರ್ವಕ್ಕೆ ಹೋದ ಮೇಲೆ ಕಾಣಿಸುವ ಒಂದು ಗುಮಟದ ಇಮಾರತಿಯಲ್ಲಿ ದೊಡ್ಡ ಇಬ್ರಾಹೀಮನ

ಸರದಾರನಾದ ಐನಉಲ್ಮುಲುಕನನ್ನು ಹುಗಿದಿರುತ್ತಾರೆ. ಇವನು ವಿಶ್ವಾಸ ಘಾತಕಿಯಾಗಿದ್ದನು. ಇಬ್ರಾಹಿಮಶಹನ ವಿರುದ್ಧವಾಗಿ ಈತನು ಬಂಡಾಯವನ್ನೆಬ್ಬಿಸಿದನು. ಈ ಬಂಡಾಯದಲ್ಲಿಯೇ ಇವನು ಕೊಲ್ಲಲ್ಪಟ್ಟನು.

## ೩೦. ಬೇಗಮ್ಮಳ ಕೆರೆಯು.

ರಾಮಟಂಕಾ, ಮಹಮ್ಮದ ಸರೋವರ, ತೊರವೆಯ ಕೆರೆ, ಇವುಗಳ ನೀರು ಊರಿಗೆ ಪೂರೈಸದಂತಾಗಲು, ಮಹಮ್ಮದಶಹನು ಅಫಝುಲ್ಲಖಾನನಿಂದ ಈ ಕೆರೆಯನ್ನು ಕಟ್ಟಿಸಿದನು. ಈ ಕೆರೆಯನ್ನು ಕಟ್ಟಿ ೨೫೦ ವರುಷಗಳಾಗಿರುವುದರಿಂದ ಬಹುಶಃ ಮುಚ್ಚುತ್ತ ಬಂದಿರುತ್ತದೆ. ಇದನ್ನು ವ್ಯವಸ್ಥೆಗೊಳಿಸುವ ಕೆಲಸವು ಕಠಿಣವಾಗಿ ತೋರಿದ್ದರಿಂದ ಭೂತನಾಳಾ ಎಂಬ ಹೆಸರಿನ ಮತ್ತೊಂದು ಕೆರೆಯನ್ನು ಊರ ಆಗ್ನೇಯಕ್ಕೆ ೩ ಮೈಲಿನ ಮೇಲೆ ಕಟ್ಟಿಸಿರುತ್ತಾರೆ.

## ಉಪಸಂಹಾರ

ಐತಿಹಾಸಿಕ ಸ್ಥಳದ ಪೂರ್ವಾಪರ ಇತಿಹಾಸವನ್ನು ತಿಳಿದುಕೊಳ್ಳದೆ ಅವುಗಳನ್ನು ನೋಡಲಿಕ್ಕೆ ಹೋಗುವದೆಂದರೆ ಪಾಯಸವೆಂದು ಬಿಸಿಹಾಲು ಸಕ್ಕರೆಇಲ್ಲದೆ ಕುಡಿದಂತಾಗುವದು. ಇಂತಹ ಐತಿಹಾಸಿಕ ಸ್ಥಳವನ್ನು ನೋಡುವವರಿಗೆ ಅವಶ್ಯವಿದ್ದಷ್ಟು ಇತಿಹಾಸವನ್ನು ಇಲ್ಲಿ ಕೊಡಬೇಕೆಂದು ಮಾಡಿರುತ್ತೇವೆ. ಈ ಇತಿಹಾಸವು ಇತಿಹಾಸದೃಷ್ಟಿಯಿಂದ ಅಪೂರ್ಣವೇ ಸರಿ! ಹಿಂದಿನ ನಾಲ್ಕು ಪ್ರಕರಣಗಳಿಗೆ ಸಂಬಂಧಿಸಿದ ಇತಿಹಾಸವನ್ನು ಇಲ್ಲಿ ಕೊಡುತ್ತೇವೆ.

ಪೃಥ್ವಿಯ ಮೇಲೆ ವಿಶೇಷ ಕಾರಸ್ಥಾನಗಳ ಕಾಲವೂ ನಮ್ಮ ಆದಿಲಶಾಹಿಯ ಕಾಲವೂ ಒಂದೇ ಇರುವದು. ಇದನ್ನೆಲ್ಲ ವಿಶೇಷವಾಗಿ ವರ್ಣಿಸಿ ವಾಚಕರಿಗೆ ತೊಂದರೆಯನ್ನು ಕೊಡದೆ ಸಂಕ್ಷಿಪ್ತವಾಗಿಯೇ ಇಲ್ಲಿ ಹೇಳುವೆವು. ಯಾವ ಕಾಲದಲ್ಲಿ ಆದಿಲಶಾಹಿಯು ಮನೆತನವು ಸ್ಥಾಪಿಸಲ್ಪಟ್ಟಿತೋ ಅದೇ ಕಾಲದಲ್ಲಿ ಬ್ರಿಟನದಲ್ಲಿ ಟ್ಯೂಡರ ಮನೆತನವು (ಡಿಫೆಂಡರ ಆಫ್ ದಿ ಫೇಥ ಎಂದು ಬಿರದು ಪಡೆದ ಲನೆಯ ಹೇನರಿಯ ತಂದೆಯಿಂದ) ಸ್ಥಾಪಿಸಲ್ಪಟ್ಟಿತು. ಅದೇ ಕಾಲದಲ್ಲಿ ಮೊಗಲ ಮನೆತನವೂ ಸ್ಥಾಪಿಸಲ್ಪಟ್ಟಿತು. ಯಾವ ಕಾಲದಲ್ಲಿ ಆದಿಲಶಾಹಿಯ ರಾಜ್ಯವು ಮುರಿಯಿತೋ ಅದೇ ಕಾಲದಲ್ಲಿ ಬ್ರಿಟನ್ನದಲ್ಲಿ ಸ್ಟುಅರ್ಟ ಮನೆತನವು ಇಲ್ಲದಾಯಿತು.

ಅದೇ ಸಮಯದಲ್ಲಿ ಮೊಗಲ ಮನೆತನವೂ ಮುರಕಳಿಗೆ ಬಂತು. ಈ ಮೂರು ಮನೆತನಗಳಲ್ಲಿ ಆಳಿದ ಅತಿಪ್ರಬಲ ಚತುರ, ವಿದ್ಯಾಸಂಪನ್ನ ಆದ ಸರಕಾರವು ಕರ್ಮಧರ್ಮ ಸಂಯೋಗದಿಂದ ಒಂದೇ ಆಗಿರುವರು. ಮತ್ತು ಒಂದೇ ಕಾಲಕ್ಕೆ ಅರಸರು ತಾವು ದೇವಾಂಶವೆಂದು ಭಾವಿಸಿ ಮನಸಿಗೆ ಬಂದಂತೆ ಕುಣಿಯುವ ಅರಸರು ಈ ಮೂರುಮನೆತನಗಳಲ್ಲಿ ಆಗಿಹೋದರು. ವಿಜಾಪುರದಲ್ಲಿ ವಿಜಯನಗರದ ವಿಧ್ವಂಸಕ ಅಲ್ಲಿ ಮತ್ತು ಇಬ್ರಾಹಿಮ ಜಗದ್ಗುರು, ದಿಲ್ಲಿಯಲ್ಲಿ ಅಕಬರಬಾದಶಹ, ಗ್ರೇಟಬ್ರಿಟನ್ನದಲ್ಲಿ ಎಲಿಝಾಬೆಥ ರಾಣಿ, ಇವರು ಸಮಕಾಲೀನರೆಂದರೆ ಅಡ್ಡಿಯಿಲ್ಲ. ತಾವು ದೇವತಾಂಶರೆಂದು ತಲೆತಿರುಗಿದವರು ವಿಜಾಪುರದಲ್ಲಿ ಮಹಮ್ಮದ ಮತ್ತು ಅಲ್ಲೀಆದಿಲಶಹ, ದಿಲ್ಲಿಯಲ್ಲಿ ಔರಂಗಜೇಬ ಮತ್ತು ಗ್ರೇಟಬ್ರುಟನ್ನದಲ್ಲಿ ಹುಚ್ಚನಾದ ೧ನೇ ಜೇಮ್ಸ್, ಮೊದಲನೇ ಚಾರ್ಲಸ. ಇವರೆಲ್ಲರೂ ಸಮಕಾಲೀನರು. ಕಾಕತಾಲೀಯ ನ್ಯಾಯದಿಂದ ಈ ಮೂರು ಮನೆತನಗಳಲ್ಲಿ ಒಂದೇ ತರದ ಇತಿಹಾಸವಿರುವದನ್ನೂ ನೋಡಿ ಆಶ್ಚರ್ಯವಾಗುತ್ತದೆ.

## ಸಮಕಾಲಿನ ಬಾದಶಹರು.

| | ವಿಜಾಪುರ | ದಿಲ್ಲಿ | ಇಂಗ್ಲಂಡು |
|---|---|---|---|
| ೧<br>೨ | ಯುಸಫ<br>ಇಸಮಾಯಿಲ<br>೧೪೯೦-೧೫೩೪ | ಬಾಬರ<br>೧೫೨೬-೧೫೩೦ | ೭ನೆಯ ಹೇನರಿ<br>೮ನೆಯ ಹೇನರಿ<br>೧೪೮೫-೧೫೪೦ |
| ೩ | ಇಬ್ರಾಹಿಮ<br>೧೫೩೪-೧೫೫೭ | ಹುಮಾಯಿನ<br>೧೫೩೦-೧೫೫೬ | ಎಡ್ವರ್ಡ<br>೧೫೪೦-೧೫೫೩<br>ಮೇರಿ ೧೫೫೫-೫೮ |
| ೪<br>೫ | ದೊಡ್ಡ ಅಲ್ಲಿ<br>೧೫೫೭-೧೫೮೦<br>ಇಬ್ರಾಹಿಮ<br>೧೫೮೦-೧೬೨೬ | ಅಕಬರ<br>೧೫೫೬-೧೬೦೫ | ಎಲಿಜಾಬೆಥ್<br>೧೫೫೮-೧೬೦೩ |
| ೬<br>೭<br>೮ | ಮಹಮ್ಮದಪಚ್ಚಾ<br>ಸಣ್ಣ ಅಲ್ಲಿ<br>೧೬೨೬-೧೬೭೨<br>ಶಿಕಂದರ | ಜಹಾಂಗೀರ<br>ಶಹಾಜಹಾನ<br>ಔರಂಗಜೇಬ<br>೧೬೦೫-೧೭೦೭ | ೧ನೆಯ ಜೇಮ್ಸ<br>೧ನೆಯ ಚಾರ್ಲಸ್<br>೧೬೦೩-೧೬೪೯ |

ಯುಸಫನ ಕಾಲವು ಬಾಬರನ ಕಾಲಕ್ಕಿಂತ ೧೦ ವರ್ಷ ಮುಂಚಿತವಾಗಿ ಇದ್ದರೂ ನಮ್ಮ ಹೇಳುವಿಕೆಗೆ ಬಾಧೆ ಬರುವಂತಿಲ್ಲ. ಯಾಕಂದರೆ ಇವರು ಬ್ರಾಹ್ಮಣೀ ಅರಸರ ಮಾಂಡಲಿಕರಿದ್ದು, ಇವರ ನಿಜವಾದ ಸ್ವಾತಂತ್ರ್ಯ ಕಾಲವು ೧೫೧೪ರಲ್ಲಿಯೇ ಇರುವದು. ಆದಿಲಶಾಹಿಯ ಮನೆತನದಲ್ಲಿಯೂ ಅಕಬರು ಎಲಿಝಾಬೆಥರಂತೆ ಕೀರ್ತಿಯನ್ನು ಹೊಂದಿದವರು ಇರುತ್ತಾರೆ. ಈ ಮೂರು ಮನೆತನದ ಅರಸರ ಶೂರತನ, ಔದಾರ್ಯ, ನ್ಯಾಯಬುದ್ಧಿಗಳನ್ನು ತುಲನೆಮಾಡಿದರೆ, ಆದಿಲಷಾಹಿ ಸ್ಥಾಪಕನೇ ಹೆಚ್ಚು ಗುಣವಂತನೆಂಬುವದು ಕಂಡುಬರುವದು. ಯಾಕಂದರೆ ಅವನು ನಿಜವಾಗಿಯೂ ತುರ್ಕಿಸುಲ್ತಾನನ ವಂಶದವನಾಗಿದ್ದನು. ಅಕಬರಎಲಿಝಾಬೆಥರಂತೆ, ದೊಡ್ಡ ಅಲ್ಲಿ, ಇಬ್ರಾಹಿಮ ಜಗದ್ಗುರು ಎಂಬ ಬಾದಶಹರು ಆದಿಲಶಾಹಿಯಲ್ಲಿ ಹೆಸರುವಾಸಿಯಾಗಿ ಹೋಗಿರುವರು. ಔರಂಗಜೇಬ ಮತ್ತು ೧ನೇ ಚಾರ್ಲಸರಂತೆ ಈ ಮನೆತನದಲ್ಲಿಯೂ ಮಹಮ್ಮದಶಹ, ಸಣ್ಣ ಅಲ್ಲಿ ಎಂಬಿಬ್ಬರು ಹುಚ್ಚ ಅರಸರು ಆಗಿಹೋದರು. ತಮ್ಮ ರಾಜ್ಯಾಧಿಕಾರವು ದೇವರಿಂದ ಬಂದದ್ದೆಂದು ಈ ಅರಸರ ತಿಳಿವಳಿಕೆಯಿತ್ತು.

ಈ ರೀತಿಯಾಗಿ ಆದಿಲಶಾಹಿಯಲ್ಲಿ ಆಗಿಹೋದ ಎಂಟು ಅರಸರಲ್ಲಿ ಆರು ಜನರ ಪರಿಚಯವನ್ನು ಮಾಡಿಕೊಟ್ಟಂತಾಯಿತು. ಇನ್ನುಳಿದ ಇಬ್ಬರ ಸಲುವಾಗಿ ವಿಚಾರಿಸುವ. ಕಡೆಯ ಅರಸನು ಶಿಕಂದರನು. ಇವನು ಗಾದಿಯ ಮೇಲೆ ಕುಳಿತಾಗ ೧೪ ವರ್ಷದ ಬಾಲಕನಿದ್ದನು. ಮುಂದೆ ಶಿವಾಜಿ ಔರಂಗಜೇಬರ ದಾಳಿಗಳಿಂದ ಇವನ ರಾಜ್ಯದಲ್ಲಿ ಶಾಂತತೆಯೇನೂ ಇದ್ದಿಲ್ಲ. ಮುಂದೆ ೧೪ ವರ್ಷಗಳೊಳಗೆ ಇವನು ಔರಂಗಜೇಬನ ಸೆರೆಯಾಳಾದನು. ಸೆರೆಮನೆಯಲ್ಲಿ ೧೪ ವರ್ಷವಿದ್ದು ವಿಷಪ್ರಯೋಗದಿಂದ ಅಲ್ಲಿಯೇ ಸತ್ತುಹೋದನು. ಇನ್ನುಳಿದ ಅರಸನೆಂದರೆ ದೊಡ್ಡ ಇಬ್ರಾಹಿಮನು. ಈತನ ಕಾಲವು ೧೫೩೪ರಿಂದ ೧೫೫೮ರ ವರೆಗೆ. ಈತನು ಶೂರನಿದ್ದು ಜಹಾಂಗೀರನಂತೆ ವ್ಯಸನಾಧೀನನಾಗಿ ಸತ್ತುಹೋದನು.

## ವಿಜಾಪುರದಲ್ಲಿದ್ದ ಕಿರಕೋಳ ವ್ಯಾಪಾರಸ್ಥರು.

೧. ಸಾಯಕಲ್ ಸಾಮಾನಿನ ಸಲುವಾಗಿ—ಕರಂದಿಕರ ಬ್ರದರ್ಸ
೨. ಘಡ್ಯಾಳ ಸಾಮಾನದ ಸಲುವಾಗಿ—ವಿಸ್ರುತೆ ಬ್ರದರ್ಸ್.
೩. ಪ್ರಸಿದ್ಧ ವಿಜಾಪುರ ಮಚ್ಚಿಗಾರನು "ಹೊನಕೇರಪ್ಪ".

---

## ವಿಜಾಪುರದಲ್ಲಿ ಪ್ರಸಿದ್ಧ ಡಾಕ್ಟರರು.

೧. ಡಾ. ರಾ। ಪಡಬಿದ್ರಿ. ೨. ರಾ। ಗೊ. ಮಂಗಳವೇಢೇಕರ.

---

## ವಿಜಾಪುರದಲ್ಲಿದ್ದ ಪ್ರಸಿದ್ಧ ಕಾಂಟ್ರ್ಯಾಕ್ಟರ.

೧. ಬಾಳಾ ರಾಮಜಿ ಅಂಬಾರೆ. ೨. ಗೋವಿಂದ ಗೋಪಾಳ ಗಾಡಗೀಳ

---

## ವಿಜಾಪುರದಲ್ಲಿ ತಂಟೆ ಬಖೇಡೆ ಕಡಿಮೆ ಮಾಡುವವರ ಅಂದರೆ ಪ್ರಸಿದ್ಧ ವಕೀಲರ ಹೆಸರುಗಳು.

ಮವಾಳ.

೧. ರಾ. ಬ. ರಾಘವೇಂದ್ರರಾವ ಕೆಂಭಾವಿ.
೨. ಓ. ವಿ. ಪಾಂಡುರಂಗ ದೇಸಾಯಿ.
೩. ರಾ. ರಾಮಕೃಷ್ಣರಾವ ಅಜರೇಕರ.
೪. ರಾ. ಬೋಧರಾವ ಧಾರವಾಡಕರ.
೫. ರಾ. ಹವಾಲದಾರ.
೬. ರಾ. ತಾವಲಗೇರಿ.
೭. ರಾ. ಕೆ. ಎಸ್. ದೇಶಪಾಂಡೆ.
೮ ರಾ. ರಾಮರಾವ ಕೆಂಭಾವಿ.

ಜಹಾಲ.

೧. ರಾ. ನಾನಾಸಾಹೇಬ ದೇಸಾಯಿ.
೨. ದೆ. ಶ್ರೀ ವೆ. ಕೌಜಲಗಿ
೩. ದೆ. ಹನುಮಂತರಾವ ಕೌಜಲಗಿ.
೪. ದೆ. ಜಯರಾವ ದೇಶಪಾಂಡೆ.
೫. ದೆ. ಮಧ್ವರಾವ ಕೆಂಭಾವಿ.
೬. ದೆ. ದಾಜೀಸಾಹೇಬ ಲಿಮಯೇ.
೭. ದೆ. ವಿಷ್ಣು ಅನಂತ ಮುಸುರಕರ.
೮. ದೆ. ಟಿ. ಎಸ್. ದರವಾರ.

---

## ವಿಜಾಪುರದಲ್ಲಿರುವ ಪ್ರಸಿದ್ಧ ವ್ಯಾಪಾರೀ ಜನರು.

೧. ಪ್ರೊ. ಛತ್ರೆ.
೨. ಶೇಟ ನಾಥಾಜಿ ರಂಗಾಜಿ.
೩. ಶೇಟ ಚುನ್ನಿಲಾಲ.
೪. ಮೊಮಣಶಲ್ಲೀ ಈರಪ್ಪಾ.
೫. ಶೇಟ ನಾರಾಯಣದಾಸ ದರಬಾರ.
೬. ಶೇಟ ರಾಮದಾಸ ದರಬಾರ.
೭. ಶೇಟ ಕಾದಾದಿ ಅಣ್ಣಾವರು.
೮. ಘಟ ಬಸಪ್ಪಾ ಪಾಟೀಲ.